KA / BG-GPO / 2515 / WPP-47 / 2006-2008



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

ಸಂಪುಟ ೧೪೧ | ಬೆಂಗಳೂರು, ಗುರುವಾರ, ಜೂನ್ ೨೨, ೨೦೦೬ (ಆಷಾಢ ೧, ಶಕ ವರ್ಷ ೧೯೨೮) | ಸಂಚಿಕೆ ೨೫

## ಭಾಗ - ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾಗಿ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

**ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ**

**ವಿಷಯ:** ಜನತಾಬಜಾರ್‌ನ ಮುಖ್ಯದ್ವಾರದ ಹತ್ತಿರದ ಏಷಿಯಾಟಿಕ್ ಕಟ್ಟಡದಲ್ಲಿರುವ ರೇಷ್ಮೆ ಇಲಾಖೆಯ ರೇಷ್ಮೆ ಜವಳಿ ಮಾರಾಟ ಮಳಿಗೆಯನ್ನು ಬಾಡಿಗೆ ಆಧಾರದಲ್ಲಿ ಕರ್ನಾಟಕ ರೇಷ್ಮೆ ಉದ್ಯಮಗಳ ನಿಗಮ ನಿಯಮಿತಕ್ಕೆ ನೀಡುವ ಬಗ್ಗೆ.

**ಓದಲಾಗಿದೆ:**
1) ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ರೇಷ್ಮೆ ಉದ್ಯಮಗಳ ನಿಗಮ ನಿಯಮಿತ ಇವರು ರೇಷ್ಮೆ ಆಯುಕ್ತರಿಗೆ ಬರೆದ ಅರೆ ಸರ್ಕಾರಿ ಪತ್ರ ಸಂಖ್ಯೆ: ಕೆಎಸ್ಐಡಿ/ಎಂಡಿ/ಡಿಒಎಸ್/ಎಸ್‌ಹೆಚ್ಆರ್/2005-06, ದಿನಾಂಕ: 4.1.2006 ಹಾಗೂ 13.1.2006.
2) ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರ ಪತ್ರ ಸಂಖ್ಯೆ: ರೇಉಕೋ/ಕೆಎಸ್ಐಸಿ/ರೇವಮಾಮ/29/ 2005-06, ದಿನಾಂಕ: 29.3.2006.

**ಪ್ರಸ್ತಾವನೆ:**

ಕರ್ನಾಟಕ ರೇಷ್ಮೆ ಉದ್ಯಮಗಳ ನಿಗಮ ನಿಯಮಿತವು ಬೆಂಗಳೂರಿನ ಗುಪ್ತಾ ಮಾರುಕಟ್ಟೆಯಲ್ಲಿ ಹೊಂದಿದ್ದ ನಿಗಮದ ರೇಷ್ಮೆ ಜವಳಿ ಮಾರಾಟ ಮಳಿಗೆಯನ್ನು ಆ ಕಟ್ಟಡವನ್ನು ಕೆಡವಿದ ಕಾರಣ ಜನತಾಬಜಾರ್ ಆವರಣಕ್ಕೆ ಸ್ಥಳಾಂತರಿಸಿದ್ದು, ಇದರಿಂದಾಗಿ ವ್ಯವಹಾರ ನಿರ್ವಹಣೆಗೆ ಮತ್ತು ಖರೀದಿಗೆ ಬರುತ್ತಿರುವ ಗ್ರಾಹಕರಿಗೆ ಹೆಚ್ಚಿನ ತೊಂದರೆಯಾಗುತ್ತಿದೆಯೆಂದು ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ರೇಷ್ಮೆ ಉದ್ಯಮಗಳ ನಿಗಮ ನಿಯಮಿತ ಇವರು ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಪತ್ರಗಳಲ್ಲಿ ವಿವರಿಸಿ, ರೇಷ್ಮೆ ಇಲಾಖೆಯು ಇದೇ ಆವರಣದ ಏಷಿಯಾಟಿಕ್ ಕಟ್ಟಡದಲ್ಲಿ ಹೊಂದಿರುವ ರೇಷ್ಮೆ ಜವಳಿ ಮಾರಾಟ ಮಳಿಗೆಯನ್ನು ಬಾಡಿಗೆ ಆಧಾರದಲ್ಲಿ ನೀಡಲು ಕೋರಿದ್ದು, ಪ್ರತಿ ಮಾಹೆಗೆ ರೂ.30,000/- ಗಳ ಬಾಡಿಗೆಗೆ ಕನಿಷ್ಠ 3 ವರ್ಷಗಳ ಅವಧಿಗೆ ಬಾಡಿಗೆ ಆಧಾರದ ಮೇಲೆ ನೀಡಲು ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಪತ್ರಗಳಲ್ಲಿ ಕೋರಿರುವುದಾಗಿ ತಿಳಿಸಿ, ಇಲಾಖೆಯ ಸ್ವಾಮ್ಯದ ಮುಡಿಗುಂಡಂ ರೇಷ್ಮೆ ನೇಯ್ಗೆ ಕಾರ್ಖಾನೆಯಲ್ಲಿ ರೇಷ್ಮೆ ಜವಳಿ ಉತ್ಪಾದನೆ ಸ್ಥಗಿತಗೊಂಡಿದ್ದು, ಗ್ರಾಹಕರ ಬೇಡಿಕೆಯ ಗುಣಮಟ್ಟದ ಜವಳಿ ಲಭ್ಯವಿಲ್ಲದ ಕಾರಣ ಮಾರಾಟ ಮಳಿಗೆಯಲ್ಲಿ ಮಾರಾಟವು ಗಣನೀಯವಾಗಿ ಕಡಿಮೆಯಾಗುತ್ತಿದೆ. ಬಾಕಿ ಇರುವ ಜವಳಿಯನ್ನು ತೀರುವಳಿ ಮಾರಾಟದ ಮೂಲಕ ಅಥವಾ ಮುಡಿಗುಂಡಂ ಮತ್ತು ಕೊಳ್ಳೇಗಾಲ ಜವಳಿ ಮಾರಾಟ ಮಳಿಗೆಗಳಲ್ಲಿ ಮಾರಾಟ ಮಾಡಲು ಹಿಂದಿರುಗಿಸಬಹುದು ಅಥವಾ ಕರ್ನಾಟಕ ರೇಷ್ಮೆ ಉದ್ಯಮಗಳ ನಿಗಮ ನಿಯಮಿತದವರು ಒಪ್ಪಿದಲ್ಲಿ ಅವರಿಗೆ ಮಾರಾಟಕ್ಕೆ ನೀಡಿ ಮಾರಾಟ ಮಾಡಿದ ಮೌಲ್ಯ ಇಲಾಖೆಗೆ ಜಮಾ ಮಾಡುವಂತೆ ತಿಳಿಸುವುದರ ಮೂಲಕ ಬಾಕಿ ಇರುವ ದಸ್ತಾನನ್ನು ವಿಲೇಗೊಳಿಸುವ ಕ್ರಮ ಕೈಗೊಳ್ಳಬಹುದು ಎಂದು ಸೂಚಿಸಿ ಇಲಾಖೆಯ ಏಷಿಯಾಟಿಕ್ ಕಟ್ಟಡದ ರೇಷ್ಮೆ ಜವಳಿ ಮಾರಾಟ ಮಳಿಗೆಯನ್ನು ಪ್ರಸ್ತಾವಿಸಿರುವ ಷರತ್ತುಗಳಿಗೊಳಪಟ್ಟು 3 ವರ್ಷಗಳ ಅವಧಿಗೆ ಮಾಹೆಯಾನ ರೂ.30,000/- ಗಳ ಬಾಡಿಗೆ ಆಧಾರದಲ್ಲಿ ದಿನಾಂಕ: 31.3.2006 ರಿಂದ ಜಾರಿಗೆ ಬರುವಂತೆ ಬಿಟ್ಟುಕೊಡುವ ಬಗ್ಗೆ ಆದೇಶ ಹೊರಡಿಸುವಂತೆ ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಪತ್ರದಲ್ಲಿ ರೇಷ್ಮೆ ಆಯುಕ್ತರು ಸರ್ಕಾರವನ್ನು ಕೋರಿದ್ದಾರೆ.

ವಿಷಯವನ್ನು ಪರಿಶೀಲಿಸಲಾಗಿದ್ದು, ರೇಷ್ಮೆ ಇಲಾಖೆಯು ಜನತಾ ಬಜಾರ್ ಮುಖ್ಯದ್ವಾರದ ಹತ್ತಿರ ಹೊಂದಿರುವ ರೇಷ್ಮೆ ಮಾರಾಟ ಮಳಿಗೆಯು ನಿಗಮದ ವಹಿವಾಟಿಗೆ ತುಂಬಾ ಅನುಕೂಲಕರವೆಂದು, ಇದನ್ನು ಬಾಡಿಗೆ ಆಧಾರದ ಮೇಲೆ ನೀಡುವಂತೆ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ರೇಷ್ಮೆ ಉದ್ಯಮಗಳ ನಿಗಮ ನಿಯಮಿತ ಇವರು ಕೋರಿರುವುದರಿಂದ ಹಾಗೂ ಮುಡಿಗುಂಡಂನಲ್ಲಿ ರೇಷ್ಮೆ ನೇಯ್ಗೆ ಕಾರ್ಖಾನೆಯಲ್ಲಿ ರೇಷ್ಮೆ ಜವಳಿ ಉತ್ಪಾದನೆ ಇಲ್ಲದ ಕಾರಣ ಗ್ರಾಹಕರ ಬೇಡಿಕೆಯ ಗುಣಮಟ್ಟದ ಜವಳಿ ಮಾರಾಟ ಮಳಿಗೆಯಲ್ಲಿ ಲಭ್ಯವಿಲ್ಲದ ಕಾರಣ ಏಷಿಯಾಟಿಕ್ ಕಟ್ಟಡದಲ್ಲಿ

ರೇಷ್ಮೆ ಇಲಾಖೆಯು ಹೊಂದಿರುವ ರೇಷ್ಮೆ ಜವಳಿ ಮಾರಾಟ ಮಳಿಗೆಯಲ್ಲಿ ಮಾರಾಟವು ಗಣನೀಯವಾಗಿ ಕಡಿಮೆಯಾಗಿರುವುದರಿಂದ ರೇಷ್ಮೆ ಇಲಾಖೆಯು ಪತ್ರದಲ್ಲಿ ಪ್ರಸ್ತಾವಿಸಿರುವಂತೆ ಅದರಲ್ಲಿ ಹೇಳಿರುವ ಷರತ್ತುಗಳಿಗೊಳಪಟ್ಟು ಸದರಿ ರೇಷ್ಮೆ ಮಾರಾಟ ಮಳಿಗೆಯನ್ನು ಕರ್ನಾಟಕ ರೇಷ್ಮೆ ಉದ್ಯಮಗಳ ನಿಗಮ ನಿಯಮಿತಕ್ಕೆ ಬಾಡಿಗೆ ಆಧಾರದಲ್ಲಿ ನೀಡಲು ತೀರ್ಮಾನಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ವಾಕೈ 16 ರೇಉನಿ 2006, ಬೆಂಗಳೂರು, ದಿನಾಂಕ: 20ನೇ ಏಪ್ರಿಲ್ 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನಲೆಯಲ್ಲಿ ಏಷಿಯಾಟಿಕ್ ಕಟ್ಟಡದಲ್ಲಿ ರೇಷ್ಮೆ ಇಲಾಖೆಯು ಹೊಂದಿರುವ ರೇಷ್ಮೆ ಜವಳಿ ಮಾರಾಟ ಮಳಿಗೆಯನ್ನು ಈ ಕೆಳಗಿನ ಷರತ್ತುಗಳಿಗೊಳಪಟ್ಟು ಮಾಹೆಯಾನ ರೂ.30,000/- ಗಳ ಬಾಡಿಗೆ ದರದಲ್ಲಿ ದಿನಾಂಕ: 31.3.2006 ರಿಂದ ಜಾರಿಗೆ ಬರುವಂತೆ 3 (ಮೂರು) ವರ್ಷಗಳ ಅವಧಿಗೆ ಕರ್ನಾಟಕ ರೇಷ್ಮೆ ಉದ್ಯಮಗಳ ನಿಗಮ ನಿಯಮಿತಕ್ಕೆ ಬಾಡಿಗೆಗೆ ನೀಡಲಾಗಿದೆ.

1. ಬಾಡಿಗೆಯನ್ನು ಪ್ರತಿ ಮಾಹೆಯ 5ನೇ ದಿನಾಂಕದ ಒಳಗಾಗಿ ರೇಷ್ಮೆ ಅಭಿವೃದ್ಧಿ ಆಯುಕ್ತರವರ ಹೆಸರಿಗೆ ಚೆಕ್ ಮೂಲಕ ಪಾವತಿಸುವುದು.
2. 3 ವರ್ಷಗಳ ನಂತರವೂ ಈ ಕಟ್ಟಡದಲ್ಲಿ ಜವಳಿ ಮಾರಾಟದ ಮಳಿಗೆ ಮುಂದುವರೆದಲ್ಲಿ ಬಾಡಿಗೆ ಪರಿಷ್ಕರಿಸಿ, ಪರಿಷ್ಕೃತ ಬಾಡಿಗೆ ನೀಡುವುದು.
3. ಮಳಿಗೆಯಲ್ಲಿರುವ ಎಲ್ಲಾ ಸಾಮಾಗ್ರಿಗಳಿಗೆ ಸ್ವೀಕೃತಿ ನೀಡಿ, ಯಥಾ ಸ್ಥಿತಿಯಲ್ಲಿ ಮುಂದುವರೆಸಿ, ಇಲಾಖೆಗೆ ಸುಸ್ಥಿತಿಯಲ್ಲಿ ಹಿಂತಿರುಗಿಸಬೇಕು.
4. ವಿದ್ಯುತ್ ಮತ್ತು ಇತರ ನಿರ್ವಹಣಾ ವೆಚ್ಚವನ್ನು ಕರ್ನಾಟಕ ರೇಷ್ಮೆ ಉದ್ಯಮಗಳ ನಿಗಮ, ನಿಯಮಿತ ಇವರೇ ಭರಿಸುವುದು.
5. ಸುತ್ತಲಿನ ಜಾಗ ಮತ್ತು ಶೌಚಾಲಯವನ್ನು ಶುಚಿಯಾಗಿಡಬೇಕು.
6. ಇಲಾಖೆಗೆ ಈ ಕಟ್ಟಡದ ಅವಶ್ಯಕತೆ ಇದ್ದಲ್ಲಿ ಇಲಾಖೆಯು ಕೋರಿಕೆ ಪತ್ರ ಸಲ್ಲಿಸಿದ 1 ತಿಂಗಳ ಒಳಗಾಗಿ ಕಟ್ಟಡವನ್ನು ತೆರವುಗೊಳಿಸಿ ಸುಸ್ಥಿತಿಯಲ್ಲಿ ಇಲಾಖೆಗೆ ಹಿಂತಿರುಗಿಸತಕ್ಕದ್ದು.
7. ಇಲಾಖೆಯ ರೇಷ್ಮೆ ಜವಳಿಗಳನ್ನು ಸ್ವೀಕೃತಿ ನೀಡಿ ಪಡೆದು ಮಾರಾಟ ಮಾಡಿ ಬಂದ ಮೌಲ್ಯವನ್ನು ಇಲಾಖೆಗೆ ಪಾವತಿಸುವುದು.
8. ಮೇಲ್ಕಂಡ ಅಂಶಗಳಿಗೆ ಒಪ್ಪಿರುವ ಬಗ್ಗೆ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ರೇಷ್ಮೆ ಉದ್ಯಮಗಳ ನಿಗಮ ನಿಯಮಿತ ಇವರು ರೂ.100-00 ರ ಮೌಲ್ಯದ ಛಾಪಾ ಕಾಗದದಲ್ಲಿ ಸಹಿ ಮಾಡಿ ನೀಡಬೇಕು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಭಾರತಿ ಆರ್. ನಾಯಕ್**

ಪಿ.ಆರ್. 615 ಪೀಠಾಧಿಕಾರಿ, ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ (ರೇಷ್ಮೆ).

## ಕಂದಾಯ ಸಚಿವಾಲಯ

**ವಿಷಯ:** ಬಸವಕಲ್ಯಾಣ ಅಭಿವೃದ್ಧಿ ಮಂಡಳಿ, ಬಸವಕಲ್ಯಾಣ, ಬೀದರ್ ಹಾಗೂ ಕಾಗಿನೆಲೆ ಅಭಿವೃದ್ಧಿ ಪ್ರಾಧಿಕಾರಕ್ಕೆ 2006-07ನೇ ಸಾಲಿನ ಮುಂದುವರಿಯುವ ಯೋಜನೆಗಳ ಬಗ್ಗೆ - ಆದೇಶ.

**ಪ್ರಸ್ತಾವನೆ:**

ಬಸವಕಲ್ಯಾಣ ಅಭಿವೃದ್ಧಿ ಮಂಡಳಿ, ಬಸವಕಲ್ಯಾಣ, ಬೀದರ್ ಹಾಗೂ ಕಾಗಿನೆಲೆ ಅಭಿವೃದ್ಧಿ ಪ್ರಾಧಿಕಾರಕ್ಕೆ 2006-07ನೇ ಸಾಲಿನ ಆಯವ್ಯಯದಲ್ಲಿ ಲೆಕ್ಕ ಶೀರ್ಷಿಕೆ 2250-00-103-2-00 (ಯೋಜನೆಯಡಿಯಲ್ಲಿ) ರೂ.2000.00 ಲಕ್ಷಗಳು ಹಾಗೂ ಕಾಗಿನೆಲೆ ಅಭಿವೃದ್ಧಿ ಪ್ರಾಧಿಕಾರಕ್ಕೆ ಲೆಕ್ಕ ಶೀರ್ಷಿಕೆ 2250-00-103-3-00 (ಯೋಜನೆ ಅಡಿಯಲ್ಲಿ) ರೂ.300.00 ಲಕ್ಷಗಳ ಅನುದಾನವನ್ನು ಒದಗಿಸಲಾಗಿದೆ.

ಬಸವಕಲ್ಯಾಣ ಅಭಿವೃದ್ಧಿ ಮಂಡಳಿ ಹಾಗೂ ಕಾಗಿನೆಲೆ ಅಭಿವೃದ್ಧಿ ಪ್ರಾಧಿಕಾರದ 2006-07ನೇ ಸಾಲಿನಲ್ಲಿ ಅಭಿವೃದ್ಧಿ ಕಾರ್ಯಕ್ರಮಗಳನ್ನು ಮುಂದುವರಿಸಿ ಅನುಷ್ಠಾನಗೊಳಿಸಲು ಮತ್ತು ಈ ಹೊಸ ಯೋಜನೆಗಳನ್ನು ಜಾರಿಗೊಳಿಸುವುದಕ್ಕೆ ಸಂಬಂಧಿಸಿದಂತೆ ಮಾನ್ಯ ಉಪ ಮುಖ್ಯಮಂತ್ರಿಗಳು ಮತ್ತು ಹಣಕಾಸು ಸಚಿವರ ಅಧ್ಯಕ್ಷತೆಯಲ್ಲಿ ದಿನಾಂಕ: 1.4.2006 ರಂದು ನಡೆದ ಸಭೆಯಲ್ಲಿ ಈ ಮುಂದುವರಿದ ಯೋಜನಾ ಕಾರ್ಯಕ್ರಮಗಳನ್ನು 2006-07ನೇ ಸಾಲಿನಲ್ಲಿ ಮುಂದುವರಿಸಲು ತೀರ್ಮಾನಿಸಿದ್ದು, ರೂ.23.00 ಕೋಟಿ ರೂಪಾಯಿಗಳನ್ನು ಒದಗಿಸಲು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಆರ್‌ಡಿ 86 ಆರ್‌ಇಹೆಚ್ 2006, ಬೆಂಗಳೂರು, ದಿನಾಂಕ: 22ನೇ ಮೇ 2006**

ಪ್ರಸ್ತಾವನೆಯಲ್ಲಿ ಹೇಳಿರುವಂತೆ ಅಭಿವೃದ್ಧಿ ಕಾರ್ಯಕ್ರಮಗಳಿಗೆ 2006-07ನೇ ಸಾಲಿನಲ್ಲಿ ಈ ಕೆಳಕಾಣಿಸಿದ ಮುಂದುವರಿದ ಯೋಜನೆಗಳನ್ನು ಮಾರ್ಪಾಟಿಲ್ಲದೆ ಮುಂದುವರಿಸಿ ಕಾರ್ಯಗತಗೊಳಿಸಲು ಸರ್ಕಾರದ ಮಂಜೂರಾತಿ ನೀಡಿದೆ.

| ಕ್ರ.ಸಂ | ಯೋಜನೆ | 2006-07ನೇ ಸಾಲಿನ ಅನುದಾನ |
|---|---|---|
| 1 | ಬಸವಕಲ್ಯಾಣ ಅಭಿವೃದ್ಧಿ ಮಂಡಳಿ, ಬೀದರ್<br>ಲೆಕ್ಕ ಶೀರ್ಷಿಕೆ 2250-00-103-2-00 | ರೂ.2000.00 ಲಕ್ಷಗಳು |
| 2 | ಕಾಗಿನೆಲೆ ಅಭಿವೃದ್ಧಿ ಪ್ರಾಧಿಕಾರ<br>ಲೆಕ್ಕ ಶೀರ್ಷಿಕೆ 2250-00-103-3-00 | ರೂ.300.00 ಲಕ್ಷಗಳು |

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ: 10.7.96 ರನ್ವಯ ಆರ್ಥಿಕ ಇಲಾಖೆಯ ಸಹಮತಿ ನೀಡಿದೆ ಎಂದು ಭಾವಿಸಿ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ. ವೆಂಕಟೇಶಮೂರ್ತಿ**

ಪಿ.ಆರ್. 665 ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಭೂ ಸ್ವಾಧೀನ 2 ಮತ್ತು ಪುನರ್ ವಸತಿ).

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

**ವಿಷಯ:** 2005-2006ನೇ ಸಾಲಿಗೆ ಡಿಆರ್‌ಡಿಎ ಆಡಳಿತ ಶೀರ್ಷಿಕೆಯಡಿ ಡಿಆರ್‌ಡಿಎ ಕಛೇರಿ ಕಟ್ಟಡ ನಿರ್ಮಿಸಲು ರಾಜ್ಯದ ಪಾಲಿನ ಎರಡನೇ ಕಂತಿನ ಹಣವನ್ನು ರಾಯಚೂರು ಜಿಲ್ಲಾ ಪಂಚಾಯತಿಗೆ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:**
1) ಕೇಂದ್ರ ಸರ್ಕಾರದ ಪತ್ರದ ಸಂಖ್ಯೆ: ಆರ್ 20015/65/2002-ಎಸ್‌ಜಿಎಸ್‌ವೈ I (ಡಿ ಅಡ್ಮಿನ್) (ಎಸ್‌ಆರ್‌ನಂ.206) ದಿನಾಂಕ: 22ನೇ ಏಪ್ರಿಲ್ 2004 ಮತ್ತು ಎಸ್.ನಂ.(15) ದಿನಾಂಕ: 22ನೇ ಮಾರ್ಚ್ 2005.
2) ಸರ್ಕಾರದ ಆದೇಶ ಸಮ ಸಂಖ್ಯೆ ದಿನಾಂಕ: 30.03.2004 ಮತ್ತು 31.03.2005.
3) ಕೇಂದ್ರ ಸರ್ಕಾರದ ಪತ್ರದ ಸಂಖ್ಯೆ: ಆರ್ 17014/34/2005-ಡಿಆರ್‌ಡಿಎ (ಎಸ್.ಆರ್.ನಂ.205) ದಿನಾಂಕ: 30ನೇ ಮಾರ್ಚ್ 2006.

**ಪ್ರಸ್ತಾವನೆ:**

ಕೇಂದ್ರ ಮತ್ತು ರಾಜ್ಯಸರ್ಕಾರಗಳು ಉಲ್ಲೇಖ (1) ಮತ್ತು (2) ರಲ್ಲಿ ರಾಜ್ಯದ ಬೀದರ್, ದಾವಣಗೆರೆ, ಗದಗ್, ಗುಲ್ಬರ್ಗ, ಕೋಲಾರ, ರಾಯಚೂರು ಮತ್ತು ಉತ್ತರ ಕನ್ನಡ (7 ಜಿಲ್ಲಾ ಪಂಚಾಯತ್‌ಗಳಿಗೆ) ಜಿಲ್ಲಾ ಪಂಚಾಯತಿಗಳಿಗೆ ಡಿಆರ್‌ಡಿಎ ಕಟ್ಟಡ ಕಟ್ಟಲು ಕ್ರಮವಾಗಿ ರೂ.61,87,000 ಮತ್ತು 20,62,000 ಗಳನ್ನು ಒಂದನೇ ಕಂತಾಗಿ ಹಾಗೂ ಗುಲ್ಬರ್ಗ ಜಿಲ್ಲೆಗೆ ಎರಡನೇ ಕಂತಿನ ಅನುದಾನ ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ಕ್ರಮವಾಗಿ ರೂ.9,00,000 ಮತ್ತು 3,00,000 ಗಳನ್ನು ಬಿಡುಗಡೆ ಮಾಡಿದ್ದವು. ಓದಲಾಗಿದೆ (3) ರಲ್ಲಿ ಕೇಂದ್ರ ಸರ್ಕಾರವು ರಾಯಚೂರು ಜಿಲ್ಲಾ ಪಂಚಾಯಿತಿಗೆ ಡಿಆರ್‌ಡಿಎ ಕಟ್ಟಡ ಕಟ್ಟಲು ಒಟ್ಟು ರೂ.21,00,000 ಗಳನ್ನು ಮಂಜೂರು ಮಾಡಿದ್ದು, ಇದರಲ್ಲಿ ಎರಡನೇ ಕಂತಿನ ಅನುದಾನ ರೂ.7,87,500 ಗಳನ್ನು ಬಿಡುಗಡೆ ಮಾಡಿದೆ. ದಿನಾಂಕ: 31.03.2006 ರಂದು ಸಂಜೆ ಕೇಂದ್ರ ಸರ್ಕಾರದ ಆದೇಶ ಸ್ವೀಕೃತವಾದ ಕಾರಣ ರಾಜ್ಯ ಸರ್ಕಾರವು ತನ್ನ ಪಾಲಿನ ಅನುದಾನ ರೂ.2,62,000/- (ಎರಡು ಲಕ್ಷದ ಅರವತ್ತೆರಡು ಸಾವಿರ ರೂಪಾಯಿ) ಗಳನ್ನು 2006-2007ನೇ ಸಾಲಿಗೆ ಬಿಡುಗಡೆ ಮಾಡಬೇಕಾಗಿದೆ. ಆದುದರಿಂದ ಈ ಆದೇಶ:

**ಸರ್ಕಾರಿ ಆದೇಶ ಸಂಖ್ಯೆ: ಗ್ರಾಅಪ 5 ಸ್ವಜಯೋ (ಡಿಆರ್‌ಡಿಎ) 2003, ಬೆಂಗಳೂರು, ದಿನಾಂಕ: 21ನೇ ಏಪ್ರಿಲ್ 2006**

ರಾಜ್ಯ ಸರ್ಕಾರವು ರಾಯಚೂರು ಜಿಲ್ಲೆಗೆ 2006-2007ನೇ ಸಾಲಿಗೆ ಡಿಆರ್‌ಡಿಎ ಆಡಳಿತ ಯೋಜನೆಯಡಿ ಡಿಆರ್‌ಡಿಎ ಕಟ್ಟಡ ಕಟ್ಟಲು ತನ್ನ ಪಾಲಿನ ಅನುದಾನ ರೂ.2,62,000/- (ಎರಡು ಲಕ್ಷದ ಅರವತ್ತೆರಡು ಸಾವಿರ ರೂಪಾಯಿ) ಗಳನ್ನು ಬಿಡುಗಡೆ ಮಾಡಲು ಮಂಜೂರಾತಿ ನೀಡಿದೆ.

| ಕ್ರ. ಸಂ. | ಜಿಲ್ಲಾ ಪಂಚಾಯತ್ ಹೆಸರು | ಜಿ.ಪಂ. ಕೋಡ್ | ಡಿ.ಡಿ.ಓ. ಕೋಡ್ | ಕೇಂದ್ರ ಸರ್ಕಾರದಿಂದ ಮಂಜೂರಾದ ಒಟ್ಟು ಅನುದಾನ | ಕೇಂದ್ರದ ಪಾಲಿನ ಒಟ್ಟು ಅನುದಾನ | ಕೇಂದ್ರದ ಪಾಲಿನ ಎರಡನೇ ಕಂತಿನ ಅನುದಾನ ಬಿಡುಗಡೆ ಮಾಡಿರುವುದು | ರಾಜ್ಯ ಸರ್ಕಾರ ಬಿಡುಗಡೆ ಮಾಡುತ್ತಿರುವ ಎರಡನೇ ಕಂತಿನ ಅನುದಾನ |
|---|---|---|---|---|---|---|---|
| 1 | ರಾಯಚೂರು | 420 | 3600ZZ0001 | 21,00,000 | 15,75,000 | 7,87,500 | 2,62,000 |

**ಷರತ್ತುಗಳು ಕೆಳಕಂಡಂತಿವೆ:**

1. ಕಛೇರಿ ಕಟ್ಟಡ ಕಟ್ಟಲು ನೀಡಿರುವ ಅನುದಾನವನ್ನು ಸದರಿ ಉದ್ದೇಶಕ್ಕಾಗಿಯೇ ವಿನಿಯೋಗಿಸತಕ್ಕದ್ದು. ಬೇರೆ ಇನ್ನಾವುದೇ ಉದ್ದೇಶಕ್ಕಾಗಿ ವಿನಿಯೋಗಿಸತಕ್ಕದ್ದಲ್ಲ.
2. ಅನುದಾನದ ಮಾದರಿಯು ಕೇಂದ್ರ ಮತ್ತು ರಾಜ್ಯಗಳ ನಡುವೆ 75:25ರ ಅನುಪಾತದಲ್ಲಿರುತ್ತದೆ.
3. ಈ ವೆಚ್ಚವನ್ನು ಡಿಆರ್‌ಡಿಎ ಆಡಳಿತ ಯೋಜನೆಯ ಲೆಕ್ಕಶೀರ್ಷಿಕೆಯಿಂದ ಭರಿಸತಕ್ಕದ್ದು. ಯೋಜನೆಯ ವೆಚ್ಚವನ್ನು ಪ್ರಧಾನ ಲೆಕ್ಕಶೀರ್ಷಿಕೆ 2515 ಇತರೆ ಗ್ರಾಮೀಣಾಭಿವೃದ್ಧಿ ಕಾರ್ಯಕ್ರಮಗಳು 00-196-ಜಿಲ್ಲಾ ಪಂಚಾಯತ್‌ಗಳಿಗೆ ಸಹಾಯ-6-ಜಿಲ್ಲಾ ಪಂಚಾಯತ್‌ಗಳು-06-ಡಿಆರ್‌ಡಿಎ ಆಡಳಿತಾತ್ಮಕ ವೆಚ್ಚ-(ಕೇಂದ್ರ ಪುರಸ್ಕೃತ ಯೋಜನೆ)-2006-2007 (2515-00-196-6-06) ರಲ್ಲಿ ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 7 ಜಡ್‌ಪಿಎ 2003, ದಿನಾಂಕ: 08.09.2004 ಮತ್ತು 14.07.2005 ರನ್ವಯ ಜಿಲ್ಲಾಪಂಚಾಯತ್ ನಿಧಿಗೆ ಜಮೆ ಮಾಡಿಕೊಂಡು ಭರಿಸತಕ್ಕದ್ದು.
4. ಬಿಡುಗಡೆ ಮಾಡುವ ಹಣದ ಆಂತರಿಕ ಲೆಕ್ಕಪರಿಶೋಧನೆಯನ್ನು ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಮಾಡುವುದು.
5. ಜಿಲ್ಲಾ ಪಂಚಾಯತ್ ಕಛೇರಿ ಕಟ್ಟಡವನ್ನು ನಿಗದಿತ ಕಾಲಾವಧಿಯಲ್ಲಿ ಪೂರ್ಣಗೊಳಿಸಿ ಸರ್ಕಾರಕ್ಕೆ ವರದಿ ನೀಡತಕ್ಕದ್ದು.
6. ರಾಯಚೂರು ಜಿಲ್ಲಾ ಪಂಚಾಯತ್‌ನ ಮುಖ್ಯ ಲೆಕ್ಕಾಧಿಕಾರಿಗಳಿಗೆ ಹಣ ತೆಗೆಯಲು ಕಾನೂನು ರೀತ್ಯ ಅಧಿಕಾರ ನೀಡಲಾಗಿದೆ.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರು, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆ ಇವರ ಸಹಮತಿ ಸಂಖ್ಯೆ: ಗ್ರಾಅಪ 220 ಪಿಬಿಎಸ್ 2006, ದಿನಾಂಕ: 15.04.2006 ರಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಜಿ.ಬಿ. ಹಿರೇಮಣಿಯವರ್**
ನಿರ್ದೇಶಕರು (ಸ್ವಉಕಾ) ಹಾಗೂ ಪ.ನಿ.
ಸರ್ಕಾರದ ಉಪ ಕಾರ್ಯದರ್ಶಿ,
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ.

ಪಿ.ಆರ್. 682

## ಶಿಕ್ಷಣ ಸಚಿವಾಲಯ

**ವಿಷಯ:** ವೃತ್ತಿ ಶಿಕ್ಷಣ ಇಲಾಖೆ ವ್ಯಾಪ್ತಿಯ 100 ವೃತ್ತಿ ಶಿಕ್ಷಣ ಕಾಲೇಜುಗಳಿಗೆ ಯಂತ್ರೋಪಕರಣ, ಸಾಧನ-ಸಾಮಗ್ರಿ ಕಾರ್ಯಗಾರ ದುರಸ್ತಿ ಇತ್ಯಾದಿಗಳಿಗಾಗಿ ಹಣ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:** ನಿರ್ದೇಶಕರು, ವೃತ್ತಿ ಶಿಕ್ಷಣ ಇಲಾಖೆ, ಬೆಂಗಳೂರು ಅವರ ಪತ್ರದ ಸಂಖ್ಯೆ: ಡಿವಿಇ/ನಿಅಶಾ/2005-06, ದಿ:28.2.2006.

**ಪ್ರಸ್ತಾವನೆ:**

ನಿರ್ದೇಶಕರು, ವೃತ್ತಿ ಶಿಕ್ಷಣ ಇಲಾಖೆ, ಬೆಂಗಳೂರು ಅವರು ಮೇಲೆ ಓದಲಾದ ದಿನಾಂಕ: 28.2.2006ರ ತಮ್ಮ ಪತ್ರದಲ್ಲಿ 2005-06ನೇ ಸಾಲಿಗೆ ಇಲಾಖೆಯ ಯೋಜನಾ ಲೆಕ್ಕ ಶೀರ್ಷಿಕೆ 2002-02-800-4-00 ರಲ್ಲಿ ನಿಗದಿಪಡಿಸಿದ್ದ 980/- ಲಕ್ಷ ರೂ.ಗಳ ಅನುದಾನದಲ್ಲಿ ವೇತನಕ್ಕಾಗಿ

ನಿಗದಿಪಡಿಸಿದ ಅನುದಾನವನ್ನು ಹೊರತುಪಡಿಸಿ ಉಳಿಯುವ 15 ಲಕ್ಷ ರೂ.ಗಳನ್ನು ಯಂತ್ರೋಪಕರಣ, ಸಾಧನ ಸಾಮಗ್ರಿ ಕಾರ್ಯಾಗಾರ ದುರಸ್ತಿ ಇತ್ಯಾದಿಗಳಿಗಾಗಿ ಪ್ರತಿ ಕಾಲೇಜಿಗೆ 15 ಸಾವಿರ ರೂ.ಗಳಂತೆ 100 ವೃತ್ತಿ ಶಿಕ್ಷಣ ಕಾಲೇಜುಗಳಿಗೆ ಬಿಡುಗಡೆ ಮಾಡಲು ಅನುಮತಿ ಕೋರಿದ್ದಾರೆ. ಇದನ್ನು ಪರಿಶೀಲಿಸಿದ ಸರ್ಕಾರವು ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 57 ಯೋಯೋಕಾ 2006, ಬೆಂಗಳೂರು, ದಿನಾಂಕ: 20ನೇ ಏಪ್ರಿಲ್ 2006**
**(ಇಡಿ:45:ಸ್ಕೀಮರ (ಯುನಿಕ್) 2006, ದಿನಾಂಕ: 20.04.2006)**

ಸರ್ಕಾರವು ವೃತ್ತಿ ಶಿಕ್ಷಣ ಇಲಾಖೆಗೆ 2005-06ನೇ ಸಾಲಿನಲ್ಲಿ ಲೆ.ಶೀ.2202-02-800-4-00 (ಯೋಜನೆ) ರಲ್ಲಿ ನಿಗದಿಪಡಿಸಿರುವ ಅನುದಾನದಲ್ಲಿ ಉಳಿಯುವ ರೂ.15.00 ಲಕ್ಷಗಳನ್ನು ತಲಾ 15 ಸಾವಿರ ರೂ.ಗಳಂತೆ ರಾಜ್ಯದಲ್ಲಿರುವ 100 ವೃತ್ತಿ ಶಿಕ್ಷಣ ಕಾಲೇಜುಗಳಿಗೆ ಯಂತ್ರೋಪಕರಣ, ಸಾಧನ ಸಾಮಗ್ರಿ ಖರೀದಿ, ಕಾರ್ಯಾಗಾರ ವೆಚ್ಚ ಇತ್ಯಾದಿಗಳಿಗಾಗಿ ಬಿಡುಗಡೆ ಮಾಡಲು ವೃತ್ತಿ ಶಿಕ್ಷಣ ಇಲಾಖೆ ನಿರ್ದೇಶಕರಿಗೆ ಈ ಮೂಲಕ ಅನುಮತಿ ನೀಡುತ್ತದೆ. ಹಣವನ್ನು ಬ್ಯಾಂಕ್ ಡ್ರಾಫ್ಟ್ ಅಥವಾ ಎಲೆಕ್ಟ್ರಾನಿಕ್ ಕ್ಲಿಯರೆನ್ಸ್ ಸಿಸ್ಟಮ್‌ನ ಮೂಲಕ ಬಿಡುಗಡೆ ಮಾಡತಕ್ಕದ್ದು.

ಶಿಕ್ಷಣ ಇಲಾಖೆಯ ಆಂತರಿಕ ಆರ್ಥಿಕ ಸಲಹೆಗಾರ ಸಹಮತಿಯನ್ನು ಅ.ಟಿ.ಸಂಖ್ಯೆ: ಶಿಇ:207:ಐಎಫ್(ಬಿಎ)2006, ದಿನಾಂಕ: 16.3.2006 ರಲ್ಲಿ ಆದೇಶವನ್ನು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೆ. ಶ್ರೀಕಂಠೇಶ್ವರ**
ವಿಶೇಷಾಧಿಕಾರಿಗಳು ಹಾಗೂ ಪದನಿಮಿತ್ತ ಸರ್ಕಾರದ
ಸಹಕಾರ್ಯದರ್ಶಿ (ಯೋಜನೆ) ಶಿಕ್ಷಣ ಇಲಾಖೆ.

ಪಿ.ಆರ್. 685

**ವಿಷಯ:** ಸರ್ಕಾರಿ ವೃತ್ತಿ ಶಿಕ್ಷಣ ಕಾಲೇಜುಗಳಲ್ಲಿ ವ್ಯಾಸಂಗ ಮಾಡುತ್ತಿರುವ ವಿದ್ಯಾರ್ಥಿನಿಯರಿಗೆ ಬೋಧನಾ ಶುಲ್ಕದಿಂದ ವಿನಾಯಿತಿ ನೀಡುವ ಬಗ್ಗೆ.

**ಓದಲಾಗಿದೆ:** ನಿರ್ದೇಶಕರು, ವೃತ್ತಿ ಶಿಕ್ಷಣ ಇಲಾಖೆ, ಬೆಂಗಳೂರು ಅವರ ಪತ್ರದ ಸಂಖ್ಯೆ: ಡಿವಿಇ/ಆವಿ1/ವೃಶಿನೌ.ಬೇಡಿಕೆ/2005-06, ದಿನಾಂಕ: 18.10.2005

**ಪ್ರಸ್ತಾವನೆ:**

ನಿರ್ದೇಶಕರು, ವೃತ್ತಿ ಶಿಕ್ಷಣ ಇಲಾಖೆ, ಬೆಂಗಳೂರು ಅವರು ಮೇಲೆ ಓದಲಾದ ದಿನಾಂಕ: 18.10.2005ರ ತಮ್ಮ ಪತ್ರದಲ್ಲಿ ರಾಜ್ಯದ ಸರ್ಕಾರಿ ವೃತಿತ ಶಿಕ್ಷಣ ಕಾಲೇಜುಗಳಲ್ಲಿ ಗ್ರಾಮೀಣ ಪ್ರದೇಶದ ಹಾಗೂ ಬಡ ಕುಟುಂಬದ ಹೆಣ್ಣು ಮಕ್ಕಳು ವ್ಯಾಸಂಗ ಮಾಡುತ್ತಿದ್ದು ಇವರಿಗೆ ಬೋಧನ ಶುಲ್ಕದಿಂದ ವಿನಾಯಿತಿ ನೀಡದಲ್ಲಿ ಬಡ ಗ್ರಾಮೀಣ ಹೆಣ್ಣು ಮಕ್ಕಳ ವೃತ್ತಿ ಶಿಕ್ಷಣಕ್ಕೆ ಹೆಚ್ಚು ಪ್ರೋತ್ಸಾಹ ನೀಡಿದಂತಾಗುವುದರಿಂದ ಸರ್ಕಾರಿ ವೃತ್ತಿ ಶಿಕ್ಷಣ ಕಾಲೇಜುಗಳಲ್ಲಿ ವ್ಯಾಸಂಗ ಮಾಡುತ್ತಿರುವ ಹೆಣ್ಣು ಮಕ್ಕಳಿಗೆ ಬೋಧನಾ ಶುಲ್ಕದಿಂದ ವಿನಾಯಿತಿ ನೀಡುವಂತೆ ಕೋರಿದ್ದಾರೆ. ಈ ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 96 ಯೋಯೋಕಾ 2006, ಬೆಂಗಳೂರು, ದಿನಾಂಕ: 22ನೇ ಏಪ್ರಿಲ್ 2006**
**(ಇಡಿ:46:ಸ್ಕೀಮರ (ಯುನಿಕ್) 2006, ದಿನಾಂಕ: 22.04.2006)**

ಸರ್ಕಾರವು ರಾಜ್ಯದ ಸರ್ಕಾರಿ ವೃತ್ತಿ ಶಿಕ್ಷಣ ಕಾಲೇಜುಗಳಲ್ಲಿ ವ್ಯಾಸಂಗ ಮಾಡುತ್ತಿರುವ ಹೆಣ್ಣು ಮಕ್ಕಳಿಗೆ 2006-07ನೇ ಶೈಕ್ಷಣಿಕ ವರ್ಷದಿಂದ ಜಾರಿಗೆ ಬರುವಂತೆ ಬೋಧನಾ ಶುಲ್ಕ ಪಾವತಿ ಮಾಡುವುದರಿಂದ ವಿನಾಯಿತಿ ನೀಡುತ್ತದೆ. ಎಲ್ಲಾ ಸರ್ಕಾರಿ ವೃತ್ತಿ ಶಿಕ್ಷಣ ಕಾಲೇಜುಗಳ ಪ್ರಿನ್ಸಿಪಾಲರು ವಿದ್ಯಾರ್ಥಿನಿಯರಿಂದ ಬೋಧನಾ ಶುಲ್ಕವನ್ನು ವಸೂಲು ಮಾಡಬಾರದೆಂದು ಈ ಮೂಲಕ ನಿರ್ದೇಶನ ನೀಡಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಅ.ಟಿ.ಸಂಖ್ಯೆ: ಆಇ 218 ವೆಚ್ಚ-8/2005 ದಿನಾಂಕ: 29.3.2006 ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೆ. ಶ್ರೀಕಂಠೇಶ್ವರ**
ವಿಶೇಷಾಧಿಕಾರಿಗಳು ಹಾಗೂ ಪದನಿಮಿತ್ತ ಸರ್ಕಾರದ
ಸಹಕಾರ್ಯದರ್ಶಿ (ಯೋಜನೆ) ಶಿಕ್ಷಣ ಇಲಾಖೆ.

ಪಿ.ಆರ್. 686

## ಒಳಾಡಳಿತ ಸಚಿವಾಲಯ

**ವಿಷಯ:** ಶ್ರೀ ಎಸ್. ಶಿವಣ್ಣ, ಮಾಜಿ ಪಿಸಿ - 194, 3ನೇ ಪಡೆ, ಕೆಎಸ್‌ಆರ್‌ಪಿ., ಬೆಂಗಳೂರು ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಬಗ್ಗೆ.

**ಓದಲಾಗಿದೆ:**
1) ಶಿಸ್ತು ಪ್ರಾಧಿಕಾರಿ ಹಾಗೂ ಕಮಾಂಡೆಂಟ್ 3ನೇ ಪಡೆ, ಕೆಎಸ್‌ಆರ್‌ಪಿ., ಬೆಂಗಳೂರು ಇವರ ಆದೇಶ ಸಂಖ್ಯೆ: ಸಿಬ್ಬಂದಿ/4/ ಡಿಇ-26/2003-04, ದಿನಾಂಕ: 11.05.2004.
2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಡೆಪ್ಯೂಟಿ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಕೆಎಸ್‌ಆರ್‌ಪಿ, ಬೆಂಗಳೂರು. ಇವರ ಆದೇಶ ಸಂಖ್ಯೆ: ಅಪೀಲು/12/2004-05, ದಿನಾಂಕ: 15.01.2005.
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 25.02.2005.
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು/2/39/2005, ದಿನಾಂಕ: 21.06.2005.
5) ಕರ್ನಾಟಕ ಲೋಕ ಸೇವಾ ಆಯೋಗದ ಪತ್ರ ಸಂಖ್ಯೆ: ಪಿಎಸ್‌ಸಿ/118/ಸಿಎನ್‌ಎಸ್/2005, ದಿನಾಂಕ: 16.11.2005.

**ಪ್ರಸ್ತಾವನೆ:**

ಶ್ರೀ ಎಸ್. ಶಿವಣ್ಣ ಮಾಜಿ ಪಿಸಿ-194, 3ನೇ ಪಡೆ, ಕೆಎಸ್‌ಆರ್‌ಪಿ, ಬೆಂಗಳೂರು ಇವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಾವಳಿ 1965ರ ನಿಯಮ 6 ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷಾರೋಪಣೆ:**

"1) ಪಿಸಿ-194, ಎಸ್. ಶಿವಣ್ಣ, 'ಎ' ದಳ, 3ನೇ ಪಡೆ, ಕೆಎಸ್‌ಆರ್‌ಪಿ., ಬೆಂಗಳೂರು ಆದ ನೀವು ದಿನಾಂಕ: 06.09.2002 ರಿಂದ 12.10.2002ರ ವರೆಗೆ ಖಾಯಿಲೆ ವಿಶ್ರಾಂತಿಯ ಮೇಲೆ ತೆರಳಿ, ದಿನಾಂಕ: 13.10.2002 ರಂದು ಕರ್ತವ್ಯಕ್ಕೆ ಹಾಜರಾಗದೆ, ದಿನಾಂಕ: 13.10.2002 ರಿಂದ 23.11.2003ರ ವರೆಗೆ (ಖಾಯಿಲೆ ವಿಶ್ರಾಂತಿ ಅವಧಿಯಿಂದ) ಒಟ್ಟು 408 ದಿವಸ ಕರ್ತವ್ಯಕ್ಕೆ ಅನಧಿಕೃತ ಗೈರುಹಾಜರಾಗಿ, ಕರ್ತವ್ಯ ನಿರ್ಲಕ್ಷತನ, ಬೇಜವಾಬ್ದಾರಿ ಮತ್ತು ಅಶಿಸ್ತನ್ನು ಪ್ರದರ್ಶಿಸಿರುತ್ತೀರಿ."

"2) ದಿನಾಂಕ: 13.10.2002 ರಿಂದ ನಿರಂತರವಾಗಿ ಅನಧಿಕೃತ ಗೈರುಹಾಜರಾದ ನಿಮಗೆ ಕರ್ತವ್ಯಕ್ಕೆ ಮರಳಿ ಹಾಜರಾಗುವಂತೆ ಸೂಚಿಸಿ, ಕಮಾಂಡೆಂಟ್ ರವರು ತಮ್ಮ ಪತ್ರ ಸಂಖ್ಯೆ: ಸಾಶಾ-3/ಡಿಎನ್/333/2002-03, ದಿನಾಂಕ: 21.11.2002 ರಂದು ಹೊರಡಿಸಲಾದ ಕರ್ತವ್ಯ ಪರಿತ್ಯಾಗ ಎಚ್ಚರಿಕೆ ನೋಟೀಸನ್ನು ದಿನಾಂಕ: 21.11.2002 ರಂದು ಸ್ವೀಕರಿಸಿಯೂ ದಿನಾಂಕ: 24.11.2003ರ ವರೆಗೆ ಕರ್ತವ್ಯಕ್ಕೆ ಹಾಜರಾಗದೆ, ಕರ್ತವ್ಯ ಲೋಪ ಹಾಗೂ ದುರ್ನಡತೆಯನ್ನು ಪ್ರದರ್ಶಿಸಿರುವಿರಿ."

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು, ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಕಮಾಂಡೆಂಟ್, 3ನೇ ಪಡೆ, ಕೆಎಸ್‌ಆರ್‌ಪಿ, ಬೆಂಗಳೂರು ಇವರು ಮೇಲೆ ಕ್ರಮ ಸಂಖ್ಯೆ: (1) ರಲ್ಲಿ ಓದಲಾದ ದಿನಾಂಕ: 11.05.2004ರ ಆದೇಶದಲ್ಲಿ ಅರ್ಜಿದಾರರನ್ನು ಸೇವೆಯಿಂದ ವಜಾಗೊಳಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ್ದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಡೆಪ್ಯೂಟಿ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್ ಕೆಎಸ್‌ಆರ್‌ಪಿ, ಬೆಂಗಳೂರು ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಯಾವುದೇ ಅಂಶಗಳಿಲ್ಲವೆಂದು ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ (2) ರಲ್ಲಿ ಓದಲಾದ ದಿನಾಂಕ: 15.01.2005ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ, ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಅರ್ಜಿದಾರರು ತಾವು ಕರ್ತವ್ಯಕ್ಕೆ ಗೈರುಹಾಜರಾಗಿರುವುದನ್ನು ಒಪ್ಪಿಕೊಂಡಿದ್ದು, ವೈದ್ಯಕೀಯ ಪ್ರಮಾಣ ಪತ್ರಗಳನ್ನು ಸಲ್ಲಿಸಿರುತ್ತಾರೆ. ಅರ್ಜಿದಾರರು 1999 ರಲ್ಲಿ ಕರ್ತವ್ಯಕ್ಕೆ ಸೇರಿದ್ದು, ಇನ್ನು ಮುಂದೆ ಗೈರುಹಾಜರಾಗದಂತೆ ಎಚ್ಚರಿಕೆ ವಹಿಸಲು ತಿಳಿಸಿ, ಒಂದು ಅವಕಾಶ ನೀಡಿ ಕರ್ತವ್ಯಕ್ಕೆ ಪುನರ್ ನೇಮಕ ಮಾಡಲು ನಿರ್ಧರಿಸಿ, ಸರ್ಕಾರದ ಈ ತೀರ್ಮಾನದ ಬಗ್ಗೆ ಕರ್ನಾಟಕ ಲೋಕ ಸೇವಾ ಆಯೋಗದ ಅಭಿಪ್ರಾಯ ಕೋರಲಾಗಿತ್ತು. ಕರ್ನಾಟಕ ಲೋಕ ಸೇವಾ ಆಯೋಗವು ದಿನಾಂಕ: 16.11.2005ರ ತನ್ನ ಪತ್ರದಲ್ಲಿ ಸರ್ಕಾರ ಉದ್ದೇಶಿಸಿರುವ ಪ್ರಸ್ತಾವನೆಗೆ ತನ್ನ ಸಹಮತಿ ನೀಡಿದೆ. ಆದ್ದರಿಂದ, ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನಾ ಆದೇಶವನ್ನು ರದ್ದುಪಡಿಸಿ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಒಇ 104 ಪೊಸಿಅ 2005, ಬೆಂಗಳೂರು, ದಿನಾಂಕ: 18ನೇ ಏಪ್ರಿಲ್ 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ದಿನಾಂಕ: 11.05.2004ರ ಶಿಸ್ತು ಪ್ರಾಧಿಕಾರಿಯ ಆದೇಶವನ್ನು ರದ್ದುಪಡಿಸಿ, ಶ್ರೀ ಎಸ್. ಶಿವಣ್ಣ, ಮಾಜಿ ಪಿಸಿ-194, 3ನೇ ಪಡೆ, ಕೆಎಸ್‌ಆರ್‌ಪಿ, ಬೆಂಗಳೂರು ಇವರು ಸರ್ಕಾರಕ್ಕೆ ಸಲ್ಲಿಸಿದ್ದ ದಿನಾಂಕ: 25.02.2005ರ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಪುರಸ್ಕರಿಸಿ, ಈ ಕೆಳಕಂಡಂತೆ ಆದೇಶಿಸಿದೆ.

1) ಅರ್ಜಿದಾರರನ್ನು ಸೇವೆಗೆ ಪುನರ್ ನೇಮಕ ಮಾಡಿದೆ.
2) ದಿನಾಂಕ: 06.09.2002 ರಿಂದ 23.11.2003ರ ವರೆಗಿನ ಗೈರುಹಾಜರಿಯನ್ನು 'ಗೈರು ಹಾಜರೆಂದೇ' ಪರಿಗಣಿಸಿದೆ.
3) ದಿನಾಂಕ: 25.11.2003 ರಿಂದ 10.05.2004ರ ವರೆಗಿನ ಅಮಾನತ್ತಿನ ಅವಧಿಯನ್ನು ಅಮಾನತ್ತೆಂದೇ ಪರಿಗಣಿಸಿದೆ.
4) ಅರ್ಜಿದಾರರ ವೇತನವನ್ನು ಪಿಸಿ ಹುದ್ದೆಯ ಕನಿಷ್ಟ ಮಟ್ಟಕ್ಕೆ ಇಳಿಸಿ, ನಂತರ ಮರು ವರ್ಷದಿಂದ ಅಲ್ಲಿಂದಲೇ ಹೊಸದಾಗಿ ವಾರ್ಷಿಕ ವೇತನ ಬಡ್ತಿ ಗಳಿಸತಕ್ಕದ್ದು.
5) ಅರ್ಜಿದಾರರು ದಿನಾಂಕ: 11.05.2004 ರಿಂದ ಸೇವೆಗೆ ಪುನರ್ ನೇಮಕಗೊಳ್ಳುವ ದಿನಾಂಕದ ವರೆಗಿನ ಅವಧಿಯನ್ನು 'ಕರ್ತವ್ಯದಿಂದ ಹೊರಗುಳಿದ ಅವಧಿ' ಎಂದೇ ಪರಿಗಣಿಸತಕ್ಕದ್ದು.

ಈ ಆದೇಶವನ್ನು ಕರ್ನಾಟಕ ಲೋಕ ಸೇವಾ ಆಯೋಗದ ದಿನಾಂಕ: 16.11.2005ರ ಪತ್ರದಲ್ಲಿನ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸಿ. ಬಸವರಾಜು**

ಪಿ.ಆರ್. 691 ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು).

**ಕಂದಾಯ ಸಚಿವಾಲಯ**

**ವಿಷಯ:** ತುಮಕೂರು ಉಪ ನೋಂದಣಿ ಕಛೇರಿ ಕಟ್ಟಡ ನಿರ್ಮಾಣಕ್ಕೆ ಆಡಳಿತಾತ್ಮಕ ಮಂಜೂರಾತಿ ನೀಡುವ ಬಗ್ಗೆ.

**ಓದಲಾಗಿದೆ:** ನೋಂದಣಿ ಮಹಾಪರಿವೀಕ್ಷಕರು ಹಾಗೂ ಮುದ್ರಾಂಕಗಳ ಆಯುಕ್ತರವರ ಪತ್ರ ಸಂಖ್ಯೆ: ಬಿಎಲ್‌ಡಿ-04/2005-06, ದಿನಾಂಕ: 04.01.2006.

**ಪ್ರಸ್ತಾವನೆ:**

ಮೇಲೆ ಓದಲಾದ ಪತ್ರ ದಿನಾಂಕ: 04.01.2006 ರಲ್ಲಿ ನೋಂದಣಿ ಮಹಾಪರಿವೀಕ್ಷಕರು ಹಾಗೂ ಮುದ್ರಾಂಕಗಳ ಆಯುಕ್ತರವರು ತುಮಕೂರು ಜಿಲ್ಲಾ ನೋಂದಣಿ ಕಛೇರಿ ಮತ್ತು ಉಪ ನೋಂದಣಿ ಕಛೇರಿ ಕಟ್ಟಡಗಳ ನಿರ್ಮಾಣಕ್ಕೆ ಮುಖ್ಯ ವಾಸ್ತುಶಿಲ್ಪಿ, ಬೆಂಗಳೂರು ಇವರು ತಯಾರಿಸಿ ನೀಡಿರುವ ವಿನ್ಯಾಸಗಳಿಗೆ ಲೋಕೋಪಯೋಗಿ ಇಲಾಖೆಯವರು ತಯಾರಿಸಿದ ಅಂದಾಜು ಪಟ್ಟಿ ರೂ.1,76,50,000/- ಗಳ ಪೈಕಿ ಉಪ ನೋಂದಣಿ ಕಛೇರಿ ನೆಲಮಹಡಿಗೆ ತಗಲುವ ವೆಚ್ಚ ರೂ.64,77,970/- ಗಳಿಗೆ ಆಡಳಿತಾತ್ಮಕ ಮಂಜೂರಾತಿ ನೀಡುವಂತೆ ಕೋರಿರುತ್ತಾರೆ. ಪ್ರಸ್ತಾವನೆಯನ್ನು ಪರಿಶೀಲಿಸಿ ಸರ್ಕಾರವು ಈ ಕೆಳಕಂಡ ಆದೇಶವನ್ನು ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಕಂಇ 1 ಮುನೋಸ 2006, ಬೆಂಗಳೂರು, ದಿನಾಂಕ: 25ನೇ ಏಪ್ರಿಲ್ 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಲೆಕ್ಕ ಶೀರ್ಷಿಕೆ 4059-80-051-0-30-386 ಅಡಿಯಲ್ಲಿ ರೂ.2.00 ಕೋಟಿಗಳನ್ನು ಒದಗಿಸಲಾಗಿರುವ ಹಣದಲ್ಲಿ ರೂ.64,77,970/- ಗಳನ್ನು ತುಮಕೂರು ಉಪ ನೋಂದಣಿ ಕಛೇರಿ ಕಟ್ಟಡಕ್ಕಾಗಿ ಉಪಯೋಗಿಸಲು ಆಡಳಿತಾತ್ಮಕ ಮಂಜೂರಾತಿ ನೀಡಿ ಆದೇಶಿಸಿದೆ ಹಾಗೂ ಲೋಕೋಪಯೋಗಿ ಇಲಾಖೆಯು ರೂಪಿಸಿದ ಅಂದಾಜು ಪಟ್ಟಿ ಆಧರಿಸಿ ಕರ್ನಾಟಕ ಗೃಹ ಮಂಡಳಿ ಮುಖಾಂತರ ನಿರ್ಮಾಣ ಕಾರ್ಯ ಕೈಗೊಳ್ಳಲು ಸೂಚಿಸಲಾಗಿದೆ.

3. ಸದರಿ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಎಫ್‌ಡಿ 91 ವೆಚ್ಚ-7/06, ದಿನಾಂಕ: 23.02.2006 ರನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ರಮೇಶ್ ಕೆ. ಜಾಗೀರ್‌ದಾರ್**
ಪಿ.ಆರ್. 696 ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ನೋಂದಣಿ ಮತ್ತು ಮುದ್ರಾಂಕ).

**EDUCATION SECRETARIAT**

**ADDENDUM No. ED 09 VIVIDA 2006, Bangalore, Dated: 18th April 2006**

In notification No. ED 43 Vivida 2001 dated: 05.05.2003 certain officers were authorized to perform the functions and discharge the duties of Registering Authorities under section 35 of the Karnataka Education Act 1983 (Karnataka Act 1 of 1995) and the Karnataka Tutorial Institutions (Registration and Regulation) Rules, 2001. In this Notification under the table, after Sl.No.5 the following shall be inserted. Namely:-

| Sl.No. | Class of Tutorial Institution | Registering Authority | Jurisdiction |
|---|---|---|---|
| 6 | Coaching for competitive examinations for selection to IAS, IPS, IFS, KAS, language coaching or any other course not included in Sl.No.1 to 5 | Director, Collegiate Education | The State of Karnataka. |

By Order and in the name of the Governor of Karnataka,
**S.M. NANDAKUMAR**
P.R. 693 Under Secretary to Government,
Education Department, (General).

**ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ**

**ತಿದ್ದುಪಡಿ ಸಂಖ್ಯೆ: ಆಕುಕ 383 ಪಿಟಿಡಿ 2004, ಬೆಂಗಳೂರು, ದಿನಾಂಕ: 25ನೇ ಏಪ್ರಿಲ್ 2006**

ಸರ್ಕಾರದ ಆದೇಶ ಸಂಖ್ಯೆ: ಆಕುಕ 383 ಪಿಟಿಡಿ 2004, ದಿನಾಂಕ: 13.3.2006ರ ಕ್ರಮ ಸಂಖ್ಯೆ: (2) ರಲ್ಲಿ ಸರ್ಕಾರದ ಕಾರ್ಯದರ್ಶಿಗಳು (ವೈದ್ಯಕೀಯ ಶಿಕ್ಷಣ) ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ ಇವರನ್ನು "ಉಪಾಧ್ಯಕ್ಷರು" ಎಂದು ನಮೂದಿಸಿರುವುದರ ಬದಲು "ಸದಸ್ಯರು" ಎಂದು ತಿದ್ದಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಸ್.ಎನ್. ಕೃಷ್ಣಕುಮಾರ್**
ಪಿ.ಆರ್. 702 ಸರ್ಕಾರದ ಅಧೀನ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.

**ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ**

**ವಿಷಯ:** ವಿವಿಧ ವರ್ಗಗಳ ಮಾರಾಟಗಾರರ ನಮೂದಿತ ಪಟ್ಟಿಯ ಬಗ್ಗೆ.

**ಓದಲಾಗಿದೆ:**
1) ದಿನಾಂಕ: 3.5.2005ರ ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 5 ಇಜಿವಿ 2005.
2) ದಿನಾಂಕ: 28.6.2005ರ ತಿದ್ದುಪಡಿ ಸಂಖ್ಯೆ: ಸಿಆಸುಇ 5 ಇಜಿವಿ 2005.
3) ದಿನಾಂಕ: 28.6.2005ರ ಸೇರ್ಪಡೆ ಸಂಖ್ಯೆ: ಸಿಆಸುಇ 5 ಇಜಿವಿ 2005.
4) ದಿನಾಂಕ: 6.2.2005ರ ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 5 ಇಜಿವಿ 2005.
5) ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಗಳ ಅಧ್ಯಕ್ಷತೆಯಲ್ಲಿ ದಿನಾಂಕ: 9.1.2006 ರಂದು ನಡೆದ ತಾಂತ್ರಿಕ ಸಲಹಾ ಸಮಿತಿಯ ಸಭೆಯ ನಡವಳಿಗಳು.

**ಪ್ರಸ್ತಾವನೆ:**

ರಾಜ್ಯದಲ್ಲಿನ ವಿವಿಧ ಸರ್ಕಾರಿ ಕಛೇರಿಗಳಲ್ಲಿ ಗಣಕೀಕರಣಕ್ಕಾಗಿ ಅವಶ್ಯವಿರುವ ಗಣಕಯಂತ್ರಗಳು, ಪ್ರಿಂಟರ್‌ಗಳು, ಅವುಗಳ ಪೂರಕ ಉಪಕರಣಗಳು, ತಾಂತ್ರಿಕ ಸೇವೆಗಳು, ಯು.ಪಿ.ಎಸ್.ಗಳು, ವಿವಿಧ ತಂತ್ರಾಂಶಗಳನ್ನು ಪೂರೈಸುವುದಕ್ಕಾಗಿ ಹಾಗೂ ತರಬೇತಿ ನೀಡುವುದಕ್ಕೆ ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿನ ತಾಂತ್ರಿಕ ಸಲಹಾ ಸಮಿತಿಯಿಂದ ಅನುಮೋದಿಸಲ್ಪಟ್ಟಿರುವ ನಾನಾ ಸಂಸ್ಥೆಗಳ ಅನುಮೋದಿತ ಪಟ್ಟಿಯ ಸಿಂಧುತ್ವವು ದಿನಾಂಕ: 31.3.2006ಕ್ಕೆ ಅಂತ್ಯಗೊಂಡಿರುತ್ತದೆ. ದಿನಾಂಕ: 9.1.2006 ರಂದು ನಡೆದ ತಾಂತ್ರಿಕ ಸಲಹಾ ಸಮಿತಿಯಲ್ಲಿ ತೆಗೆದುಕೊಂಡ ನಿರ್ಣಯದಂತೆ, ಹೊಸದಾಗಿ ಮಾರಾಟಗಾರರ ಪಟ್ಟಿಯನ್ನು ಸಿದ್ದಗೊಳಿಸಲು ಸಮಯಾವಕಾಶ ಬೇಕಾಗುವುದರಿಂದ, ಪ್ರಸ್ತುತ ಇರುವ

ಮಾರಾಟಗಾರರ ಪಟ್ಟಿಯ ಸಿಂಧುತ್ವವನ್ನು ಇನ್ನೂ ಆರು ತಿಂಗಳ ಅಥವಾ ಹೊಸ ಪಟ್ಟಿ ಸಿದ್ದಗೊಳ್ಳುವರಿಗೆ ಯಾವುದು ಮೊದಲು ಅಲ್ಲಿಯವರಿಗೆ ಕಾಲ ವಿಸ್ತರಿಸುವುದು ಅವಶ್ಯವಾಗಿದೆ. ಈ ಬಗ್ಗೆ ಕೆಳಕಾಣಿಸಿದಂತೆ ಸರ್ಕಾರದ ಆದೇಶವನ್ನು ಪ್ರಸ್ತಾಪಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 5 ಇಜಿವಿ 2005, ಬೆಂಗಳೂರು, ದಿನಾಂಕ: 26ನೇ ಏಪ್ರಿಲ್ 2006**

ರಾಜ್ಯದಲ್ಲಿನ ವಿವಿಧ ಸರ್ಕಾರಿ ಕಛೇರಿಗಳಲ್ಲಿ ಗಣಕೀಕರಣಕ್ಕಾಗಿ ಅವಶ್ಯವಿರುವ ಗಣಕಯಂತ್ರಗಳು, ಪ್ರಿಂಟರ್‌ಗಳು, ಅವುಗಳ ಪೂರಕ ಉಪಕರಣಗಳು, ತಾಂತ್ರಿಕ ಸೇವೆಗಳು, ಯು.ಪಿ.ಎಸ್.ಗಳು ವಿವಿಧ ತಂತ್ರಾಂಶಗಳನ್ನು ಪೂರೈಸುವುದಕ್ಕಾಗಿ ಹಾಗೂ ತರಬೇತಿ ನೀಡುವುದಕ್ಕಾಗಿ ಮೇಲೆ 1 ರಿಂದ 4 ರವರೆಗೆ ಓದಲಾದ ಸರ್ಕಾರದ ಆದೇಶಗಳಲ್ಲಿನ ಸಂಸ್ಥೆಗಳ ಸಿಂಧುತ್ವವನ್ನು ದಿನಾಂಕ: 30.9.2006 ರವರಿಗೆ ಅಥವಾ ಹೊಸ ಪಟ್ಟಿ ಸಿದ್ದಗೊಳ್ಳುವರಿಗೆ ಯಾವುದು ಮೊದಲು ಅಲ್ಲಿಯವರಿಗೆ ವಿಸ್ತರಿಸಲು ಸರ್ಕಾರದ ಅನುಮೋದನೆ ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ರಾಜೀವ ಚಾವ್ಲಾ**

ಪಿ.ಆರ್. 706

ಸರ್ಕಾರದ ಕಾರ್ಯದರ್ಶಿ, ಇ-ಆಡಳಿತ

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಆಸು).

**ತಿದ್ದುಪಡಿ**

**ಸಂಖ್ಯೆ: ಸಿಆಸುಇ 174 ಈಸಪ 2005, ಬೆಂಗಳೂರು, ದಿನಾಂಕ: 21ನೇ ಏಪ್ರಿಲ್ 2006**

ದಿನಾಂಕ: 17.01.2006ರ ಸರ್ಕಾರದ ಆದೇಶದ ಸಂಖ್ಯೆ: ಸಿಆಸುಇ 174 ಈಸಪ 2005 ರಲ್ಲಿ ರಾಜ್ಯ ಮಟ್ಟದ ಜಂಟಿ ಸಮಾಲೋಚನಾ ಸಮಿತಿಯನ್ನು 2 ವರ್ಷಗಳ ಅವಧಿಗೆ ಪುನರ್‌ರಚಿಸಲಾಗಿದೆ. ಈ ಆದೇಶದಲ್ಲಿ "ನೌಕರರ ಸಂಘದ ಪ್ರತಿನಿಧಿಗಳು" ಎಂಬ ಶೀರ್ಷಿಕೆಯಡಿ ಕೇವಲ ನೌಕರರ ಸಂಘದ ಪ್ರತಿನಿಧಿಗಳು ನೌಕರರ ಸಂಘದಲ್ಲಿ ಹೊಂದಿರುವ ಪದನಾಮವನ್ನು ಮಾತ್ರ ಪರಿಗಣಿಸಲಾಗಿದೆ. ಆದುದರಿಂದ, "ನೌಕರರ ಸಂಘದ ಪ್ರತಿನಿಧಿಗಳು" ಎಂಬ ಶೀರ್ಷಿಕೆಯಡಿ ನೌಕರರ ಸಂಘದ ಪ್ರತಿನಿಧಿಗಳ ಹೆಸರು ಮತ್ತು ಪದನಾಮವನ್ನು ಸೇರಿಸಿ ಈ ಕೆಳಕಂಡಂತೆ ತಿದ್ದುಪಡಿಸಲಾಗಿದೆ.

**ನೌಕರರ ಸಂಘದ ಪ್ರತಿನಿಧಿಗಳು**

| ಕ್ರ.ಸಂ. | ಹೆಸರು ಮತ್ತು ಕಛೇರಿ | ಇಲಾಖೆ | ಸಮಿತಿ ಪದನಾಮ |
|---|---|---|---|
| 1 | ಶ್ರೀ ಹೆಚ್.ಎನ್. ಶೇಷೆಗೌಡ, ಅಧ್ಯಕ್ಷರು, ಕರ್ನಾಟಕ ರಾಜ್ಯ ಸರ್ಕಾರಿ ನೌಕರರ ಸಂಘ, ಬೆಂಗಳೂರು | ಭೂಮಾಪನಾ, ಕಂದಾಯ ವ್ಯವಸ್ಥೆ ಹಾಗೂ ಭೂದಾಖಲೆಗಳ ಇಲಾಖೆ | ಸದಸ್ಯರು |
| 2 | ಶ್ರೀ ಎಲ್. ಭೈರಪ್ಪ, ಪ್ರಧಾನ ಕಾರ್ಯದರ್ಶಿ, ಕರ್ನಾಟಕ ರಾಜ್ಯ ಸರ್ಕಾರಿ ನೌಕರರ ಸಂಘ, ಬೆಂಗಳೂರು. | ಕರ್ನಾಟಕ ಸರ್ಕಾರದ ಸಚಿವಾಲಯ | ಸದಸ್ಯರು |
| 3 | ಶ್ರೀ ಚೌಡಯ್ಯ, ಖಜಾಂಚಿ, ಕರ್ನಾಟಕ ರಾಜ್ಯ ಸರ್ಕಾರಿ ನೌಕರರ ಸಂಘ, ಬೆಂಗಳೂರು | ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ, ನಿರ್ದೇಶಕರ ಕಛೇರಿ | ಸದಸ್ಯರು |
| 4 | ಶ್ರೀ ಈರೇಗೌಡ, ಅಧ್ಯಕ್ಷರು, ಕರ್ನಾಟಕ ರಾಜ್ಯ ಪ್ರಾಥಮಿಕ ಶಾಲಾ ಶಿಕ್ಷಕರ ಸಂಘ, ಗಾಂಧಿನಗರ, ಬೆಂಗಳೂರು. | ಪ್ರಾಥಮಿಕ ಶಿಕ್ಷಣ | ಸದಸ್ಯರು |
| 5 | ಶ್ರೀ ಬಿ.ಎಂ. ನಟರಾಜ್, ಅಧ್ಯಕ್ಷರು, ಕರ್ನಾಟಕ ರಾಜ್ಯ ಡಿ ಗ್ರೂಪ್ ನೌಕರರ ಕೇಂದ್ರ ಸಂಘ, ಬಹುಮಹಡಿ ಕಟ್ಟಡ, ಬೆಂಗಳೂರು. | ಲೋಕೋಪಯೋಗಿ ಇಲಾಖೆ | ಸದಸ್ಯರು |
| 6 | ಶ್ರೀ ತಿಮ್ಮಯ್ಯ, ಅಧ್ಯಕ್ಷರು, ಕರ್ನಾಟಕ ರಾಜ್ಯ ಸರ್ಕಾರಿ ವಾಹನ ಚಾಲಕರ ಕೇಂದ್ರ ಸಂಘ, ಕೆ.ಕೆ.ಗೆಸ್ಟ್‌ಹೌಸ್ ಆವರಣ ಹೈಗ್ರೌಂಡ್ಸ್, ಬೆಂಗಳೂರು. | ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ | ಸದಸ್ಯರು |
| 7 | ಶ್ರೀ ಜಿ.ಎಂ. ಸಣ್ಣಮುದ್ದಯ್ಯ, ಅಧ್ಯಕ್ಷರು, ಕರ್ನಾಟಕ ರಾಜ್ಯ ಸರ್ಕಾರಿ ನೌಕರರ ಸಂಘ, ಜಿಲ್ಲಾ ಶಾಖೆ, ತುಮಕೂರು. | ಕಂದಾಯ ಇಲಾಖೆ | ಸದಸ್ಯರು |
| 8 | ಶ್ರೀ ಹೆಚ್.ಕೆ. ರಾಮು, ಅಧ್ಯಕ್ಷರು, ಕರ್ನಾಟಕ ರಾಜ್ಯ ಸರ್ಕಾರಿ ನೌಕರರ ಸಂಘ, ಜಿಲ್ಲಾ ಶಾಖೆ, ಮೈಸೂರು. | ಆಹಾರ ಮತ್ತು ನಾಗರೀಕ ಸರಬರಾಜು ಇಲಾಖೆ | ಸದಸ್ಯರು |
| 9 | ಶ್ರೀ ಬಸವರಾಜಭರಶೆಟ್ಟಿ, ಅಧ್ಯಕ್ಷರು, ಕರ್ನಾಟಕ ರಾಜ್ಯ ಸರ್ಕಾರಿ ನೌಕರರ ಸಂಘ, ಜಿಲ್ಲಾ ಶಾಖೆ, ಬೀದರ್. | ಆರೋಗ್ಯ ಇಲಾಖೆ | ಸದಸ್ಯರು |
| 10 | ಶ್ರೀ ಎನ್.ಎಂ. ಪುಟ್ಟಸ್ವಾಮಯ್ಯ, ಉಪಾಧ್ಯಕ್ಷರು, ಕರ್ನಾಟಕ ರಾಜ್ಯ ಸರ್ಕಾರಿ ನೌಕರರ ಸಂಘ, ಬೆಂಗಳೂರು. | ಕೃಷಿ ಇಲಾಖೆ | ಸದಸ್ಯರು |

| ಕ್ರ.ಸಂ. | ಹೆಸರು ಮತ್ತು ಕಛೇರಿ | ಇಲಾಖೆ | ಸಮಿತಿ ಪದನಾಮ |
|---|---|---|---|
| 11 | ಶ್ರೀ ಎಂ.ಎನ್. ನಾಯಕ್, ಅಧ್ಯಕ್ಷರು, ಕರ್ನಾಟಕ ರಾಜ್ಯ ಸರ್ಕಾರಿ ನೌಕರರ ಸಂಘ, ಜಿಲ್ಲಾ ಶಾಖೆ, ಕಾರವಾರ (ಉತ್ತರ ಕನ್ನಡ). | ಖಜಾನೆ ಇಲಾಖೆ | ಸದಸ್ಯರು |
| 12 | ಶ್ರೀಮತಿ ಖಾನಿಜಾ ಕಾಕಡಿ, ಟ್ಯೂಟರ್, ಕಾಲೇಜ್ ಆಫ್ ನರ್ಸಿಂಗ್, ವಿಕ್ಟೋರಿಯಾ ಆಸ್ಪತ್ರೆ, ಬೆಂಗಳೂರು. | ವೈದ್ಯಕೀಯ ಶಿಕ್ಷಣ ಇಲಾಖೆ | ಸದಸ್ಯರು |

ಈ ಮೇಲ್ಕಂಡ ತಿದ್ದುಪಡಿಯನ್ನು ಹೊರತುಪಡಿಸಿ ದಿನಾಂಕ: 17.01.2006 ಸರ್ಕಾರದ ಆದೇಶದ ಸಂಖ್ಯೆ: ಸಿಆಸುಇ 174 ಈಸಪ 2005 ರಲ್ಲಿನ ಇತರೆ ಯಾವುದೇ ಅಂಶಗಳ ಬಗ್ಗೆ ಬದಲಾವಣೆ ಇರುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಸ್.ಆರ್. ಹಿರೇಮಠ್**
ಪಿ.ಆರ್. 708 ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಕಾರ್ಯಾಧ್ಯಯನ-2).

## ಕಂದಾಯ ಸಚಿವಾಲಯ

**ವಿಷಯ:** ಶ್ರೀ ರುದ್ರೇಶ್ವರಯ್ಯ, ತಹಶೀಲ್ದಾರ್ ಇವರನ್ನು ಅಮಾನತ್ತಿನಿಂದ ಬಿಡುಗಡೆ ಮಾಡುವ ಕುರಿತು.
**ಓದಲಾಗಿದೆ:** ದಿನಾಂಕ: 5.9.2005ರ ಸರ್ಕಾರಿ ಆದೇಶ ಸಂಖ್ಯೆ: ಕಂಇ 44 ಎಡಿಇ 2005.

**ಪ್ರಸ್ತಾವನೆ:**

ಶ್ರೀ ರುದ್ರೇಶ್ವರಯ್ಯ, ಹಿಂದಿನ ತಹಶೀಲ್ದಾರ್, ನಂಜನಗೂಡು ತಾಲ್ಲೂಕು, ಮೈಸೂರು ಜಿಲ್ಲೆ ಇವರನ್ನು ಅಧಿಕಾರ ವ್ಯಾಪ್ತಿ ಮೀರಿ ಕರ್ತವ್ಯ ಲೋಪವೆಸಗಿರುವುದು ಮೇಲ್ನೋಟಕ್ಕೆ ಸಾಬೀತಾಗಿದ್ದ ಕಾರಣ, ಮೇಲೆ ಓದಲಾದ ಆದೇಶದಲ್ಲಿ ಶ್ರೀ ರುದ್ರೇಶ್ವರಯ್ಯ, ತಹಶೀಲ್ದಾರರ ರವರ ವಿರುದ್ಧ ಇಲಾಖಾ ವಿಚಾರಣೆ ಹೂಡುವುದನ್ನು ಬಾಕಿ ಇಟ್ಟು ಅವರನ್ನು ಸೇವೆಯಿಂದ ಅಮಾನತ್ತುಗೊಳಿಸಲಾಗಿತ್ತು.

ಸದರಿ ಅಮಾನತ್ತಿನ ಆದೇಶವನ್ನು ಪುನರ್ ಪರಿಶೀಲಿಸಿದ ಸರ್ಕಾರವು ಸದರಿ ಆಪಾದಿತರನ್ನು ಅಮಾನತ್ತಿನಲ್ಲಿ ಮುಂದುವರಿಸುವ ಅಗತ್ಯವಿಲ್ಲವೆಂದು ಮನಗಂಡು ಅವರ ವಿರುದ್ಧದ ಇಲಾಖಾ ವಿಚಾರಣೆಯನ್ನು ಬಾಕಿಯಿಟ್ಟು ಅಮಾನತ್ತಿನಿಂದ ಬಿಡುಗಡೆ ಮಾಡಲು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಕಂಇ 44 ಎಡಿಇ 2005, ಬೆಂಗಳೂರು, ದಿನಾಂಕ: 22ನೇ ಏಪ್ರಿಲ್ 2006**

ಸರ್ಕಾರವು ವಿಷಯವನ್ನು ಕೂಲಂಕಷವಾಗಿ ಪರಿಶೀಲಿಸಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 10(5)(ಸಿ) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ರುದ್ರೇಶ್ವರಯ್ಯ, ತಹಶೀಲ್ದಾರ್ ಇವರ ವಿರುದ್ಧದ ಇಲಾಖಾ ವಿಚಾರಣೆಯನ್ನು ಬಾಕಿಯಿಟ್ಟು ತಕ್ಷಣದಿಂದ ಜಾರಿಗೆ ಬರುವಂತೆ ಅಮಾನತ್ತಿನಿಂದ ಬಿಡುಗಡೆಗೊಳಿಸಿ ಪ್ರಾದೇಶಿಕ ಆಯುಕ್ತರ ಕಛೇರಿ, ಮೈಸೂರು ಇಲ್ಲಿ ಖಾಲಿ ಇರುವ ತಹಶೀಲ್ದಾರ್ ಹುದ್ದೆಗೆ ನೇಮಕ ಮಾಡಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಆರ್. ಶ್ರೀಮತಿ ಚಂದ್ರಶೇಖರ್**
ಪಿ.ಆರ್. 701 ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಸೇವೆಗಳು-3).

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

**ವಿಷಯ:** 2006-07ನೇ ಸಾಲಿನ ಒಂದನೇ ಕಂತಿನ ಶಾಸನಬದ್ಧ ಅನುದಾನವನ್ನು ಗ್ರಾಮ ಪಂಚಾಯತಿಗಳಿಗೆ ಬಿಡುಗಡೆ ಮಾಡುವ ಬಗ್ಗೆ.
**ಓದಲಾಗಿದೆ:** 1) ಆರ್ಥಿಕ ಇಲಾಖೆ ಅ.ಟಿ.ಸಂಖ್ಯೆ: ಆಇ 520 ವೆಚ್ಚ-6/06, ದಿನಾಂಕ: 25.04.2006.

**ಪ್ರಸ್ತಾವನೆ:**

2006-07ನೇ ಸಾಲಿಗೆ ರಾಜ್ಯದ ಎಲ್ಲಾ ಗ್ರಾಮ ಪಂಚಾಯಿತಿಗಳಿಗೆ ಶಾಸನಬದ್ಧ ಅನುದಾನವನ್ನು ಆಯವ್ಯಯ ಲೆಕ್ಕ ಶೀರ್ಷಿಕೆ 2515-00-198-1-07 (ಯೋಜನೆ) ಅಡಿ ಒಟ್ಟಾರೆ 28265 ಲಕ್ಷ ರೂಪಾಯಿಗಳನ್ನು ಒದಗಿಸಲಾಗಿದೆ. ಈ ಅನುದಾನದಿಂದ ಪ್ರತಿ ಗ್ರಾಮ ಪಂಚಾಯತಿಗೆ ವಾರ್ಷಿಕವಾಗಿ ತಲಾ 5.00 ಲಕ್ಷ ರೂಪಾಯಿಗಳು ಲಭ್ಯವಾಗುತ್ತದೆ. 2006-07ನೇ ಸಾಲಿಗೆ ಒಂದನೇ ತ್ರೈಮಾಸಿಕ ವೆಚ್ಚಕ್ಕಾಗಿ ಪ್ರಸ್ತಾಪಿತ ಲೆಕ್ಕ ಶೀರ್ಷಿಕೆಯಿಂದ ಒಟ್ಟು ರೂ.7065.00 ಲಕ್ಷಗಳನ್ನು ಉಲ್ಲೇಖ (1) ರಲ್ಲಿ ತಿಳಿಸಿರುವ ಅನಧಿಕೃತ ಟಿಪ್ಪಣಿಯಲ್ಲಿ ಆರ್ಥಿಕ ಇಲಾಖೆಯು ಬಿಡುಗಡೆ ಮಾಡಿರುತ್ತದೆ. ಪ್ರತಿ ಗ್ರಾಮ ಪಂಚಾಯಿತಿಗೆ ಸರಾಸರಿ ರೂ.1.25 ಲಕ್ಷ ಲಭ್ಯವಾಗಲಿದೆ.

2006-07ನೇ ಸಾಲಿನ ಒಂದನೇ ಕಂತಿನ ಅನುದಾನ ಒಟ್ಟು ರೂ.7065 ಲಕ್ಷಗಳನ್ನು ಆರ್ಥಿಕ ಇಲಾಖೆಯು ಉಲ್ಲೇಖ (1) ರಲ್ಲಿ ತಿಳಿಸಿರುವ ಅನಧಿಕೃತ ಟಿಪ್ಪಣಿಯಲ್ಲಿ ಬಿಡುಗಡೆ ಮಾಡಿರುತ್ತದೆ. ಈ ಅನುದಾನವನ್ನು ರಾಜ್ಯದ ಎಲ್ಲಾ ಗ್ರಾಮ ಪಂಚಾಯತಿಗಳಿಗೆ ಸಮನಾಗಿ ಬಿಡುಗಡೆ ಮಾಡಲು ಉದ್ದೇಶಿಸಲಾಗಿದೆ. ಪ್ರಸ್ತಾವನೆಯನ್ನು ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಗ್ರಾಅಪ 167 ಗ್ರಾಪಂಅ 2006, ಬೆಂಗಳೂರು, ದಿನಾಂಕ: 26ನೇ ಏಪ್ರಿಲ್ 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ 2006-07ನೇ ಸಾಲಿನ ಶಾಸನಬದ್ಧ ಅನುದಾನದ 1ನೇ ಕಂತಿನ ಮೊತ್ತ ರೂ.7065.00 ಲಕ್ಷಗಳನ್ನು (ಏಳು ಸಾವಿರದ ಅರವತ್ತೈದು ಲಕ್ಷ) ರೂಪಾಯಿಗಳನ್ನು ಬಿಡುಗಡೆ ಮಾಡಿ ಆದೇಶಿಸಿದೆ. ಈ ವೆಚ್ಚವನ್ನು 2006-07ನೇ ಸಾಲಿನ ಲೆಕ್ಕ ಶೀರ್ಷಿಕೆ 2515-00-198-1-07 (ಯೋಜನೆ) ಅಡಿ ಆಯವ್ಯಯ ಅವಕಾಶದಲ್ಲಿ ಭರಿಸಲಾಗಿದೆ. ಈ ಅನುದಾನದ ಮೊತ್ತವನ್ನು ಫೇಯಿಸ್ ರಸೀದಿಯ ಮೇಲೆ ಪಡೆದು ಸಿಂಡಿಕೇಟ್ ಬ್ಯಾಂಕ್, ಬೆಂಗಳೂರು ನಗರ ನೀರು ಸರಬರಾಜು ಮಂಡಳಿ ಶಾಖೆ, ಮೈಸೂರು ಬ್ಯಾಂಕ್ ವೃತ್ತ, ಬೆಂಗಳೂರು

ಇಲ್ಲಿ ತೆರೆದಿರುವ ಖಾತೆಯ ಮುಖಾಂತರ ರಾಜ್ಯದ ಎಲ್ಲಾ ಗ್ರಾಮ ಪಂಚಾಯಿತಿಗಳ ಸ್ಥಳೀಯ ಬ್ಯಾಂಕ್ ಖಾತೆಗೆ ಜಮಾ ಮಾಡಲು ಆದೇಶಿಸಿದೆ. ಈ ಅನುದಾನವನ್ನು ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ 1993ರ ಕಲಂ 206ರ ಅಡಿಯಲ್ಲಿ ವಿವರಿಸಿರುವ ಉದ್ದೇಶಗಳಿಗೆ ಭರಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ: ಎಫ್‌ಡಿ 520 ವೆಚ್ಚ-6 2006, ದಿನಾಂಕ: 25.04.2006 ರಲ್ಲಿ ಸಹಮತಿ ಪಡೆದು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೆ.ಎಸ್. ಶಾಮಸುಂದರ**
ಸರ್ಕಾರದ ಅಧೀನ ಕಾರ್ಯದರ್ಶಿ,
ಗ್ರಾಮೀಣಾಭಿವೃದ್ಧಿ ಮತ್ತು ಪಂ. ರಾಜ್ ಇಲಾಖೆ.

ಪಿ.ಆರ್. 711

## ಕನ್ನಡ ಮತ್ತು ಸಂಸ್ಕೃತಿ ಸಚಿವಾಲಯ

**ವಿಷಯ:** ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ ಇವರಿಗೆ ಪಂಚಾಕ್ಷರಿ ಗವಾಯಿಗಳ ಸಂಸ್ಕರಣಾ ಕಾರ್ಯಕ್ರಮದಲ್ಲಿ ಭಾಗವಹಿಸಲು ಬೆಂಗಳೂರು ಮುಂಬಯಿ ನಡುವೆ ಪ್ರಯಾಣ ಮಾಡಲು ಅನುಮತಿ ನೀಡುವ ಬಗ್ಗೆ.

**ಓದಲಾಗಿದೆ:** ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು ರವರ ಅ.ಸ.ಪತ್ರ ಸಂಖ್ಯೆ: ಕಸನಿ 1 ನಿಅಶಾ 2006-07, ದಿನಾಂಕ: 18.4.2006.

**ಪ್ರಸ್ತಾವನೆ:**

ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು ಅವರು ಮೇಲೆ ಓದಲಾದ ದಿನಾಂಕ: 18.4.2006ರ ಪತ್ರದಲ್ಲಿ ಮುಂಬಯಿ ಮೈಸೂರು ಅಸೋಷಿಯೇಷನ್ ವತಿಯಿಂದ ಮೇ, 6 ಮತ್ತು 7 ರಂದು ಹಮ್ಮಿಕೊಂಡಿರುವ ಪಂಚಾಕ್ಷರಿ ಗವಾಯಿ ಸಂಸ್ಕರಣಾ ಕಾರ್ಯಕ್ರಮದಲ್ಲಿ ಇಲಾಖಾ ವತಿಯಿಂದ ಭಾಗ ವಹಿಸಲು ದಿನಾಂಕ: 5.5.2006 ರಿಂದ 7.5.2006 ರವರೆಗೆ ಮುಂಬಯಿ ಪ್ರವಾಸ ಕೈಗೊಳ್ಳಲು ಅನುಮತಿ ಕೋರಿದ್ದಾರೆ. ಇದನ್ನು ಪರಿಶೀಲಿಸಿದ ಸರ್ಕಾರವು ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಸಂಕಇ 23 ಕಸನಿ 2006, ಬೆಂಗಳೂರು, ದಿನಾಂಕ: 2ನೇ ಮೇ 2006**

ಮುಂಬಯಿಯಲ್ಲಿ ನಡೆಯುವ ಪಂಚಾಕ್ಷರಿ ಗವಾಯಿಗಳ ಸಂಸ್ಕರಣಾ ಕಾರ್ಯಕ್ರಮದಲ್ಲಿ ಇಲಾಖೆಯ ವತಿಯಿಂದ ಭಾಗವಹಿಸುವ ಸಲುವಾಗಿ ಮೇ 5 ರಿಂದ 7 ರವರೆಗೆ ಮುಂಬಯಿ ಪ್ರವಾಸ ಕೈಗೊಳ್ಳಲು ಶ್ರೀ ವೆಂ. ಶ್ರೀನಿವಾಸ್, ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಅವರಿಗೆ ಈ ಮೂಲಕ ಸರ್ಕಾರದ ಅನುಮತಿ ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಂ.ಎಸ್. ಶಿವರಾಮ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಕನ್ನಡ ಮತ್ತು ಸಂಸ್ಕೃತಿ ಇಲಾಖೆ (ಆಡಳಿತ ಕನ್ನಡ).

ಪಿ.ಆರ್. 715

## ಸಮಾಜ ಕಲ್ಯಾಣ ಸಚಿವಾಲಯ

**ವಿಷಯ:** ಇತರೆ ಹಿಂದುಳಿದ ವರ್ಗಗಳ ಪ್ರವರ್ಗ 2ಎ, 2ಬಿ, 3ಎ ಮತ್ತು 3ಬಿ ಗಳಿಗೆ ಸೇರಿದ ವೃತ್ತಿಪರ ಕೋರ್ಸುಗಳಲ್ಲಿ ವ್ಯಾಸಂಗ ಮಾಡುತ್ತಿರುವ ವಿದ್ಯಾರ್ಥಿಗಳಿಗೆ ಊಟದ ವೆಚ್ಚ ನೀಡಿಕೆ ಕುರಿತು.

**ಓದಲಾಗಿದೆ:**
1) ಸರ್ಕಾರದ ಆದೇಶ ಸಂಖ್ಯೆ: ಸಕಇ 100 ಬಿಎಂಎಸ್ 2002, ದಿನಾಂಕ: 6.7.2002.
2) ಆಯುಕ್ತರು, ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ, ಬೆಂಗಳೂರು ಇವರ ಪತ್ರ ಸಂಖ್ಯೆ: ಹಿಂವನಿ:ವಿವೇ-2: ಸಿಆರ್-31:2004-05, ದಿನಾಂಕ: 31.5.2005.
3) ಆಯುಕ್ತರು, ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ, ಬೆಂಗಳೂರು ಇವರ ಪತ್ರ ಸಂಖ್ಯೆ: ಹಿಂವನಿ:ವಿವೇ-2: ಸಿಆರ್-31:2004-2005, ದಿನಾಂಕ: 14.6.2005.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ: (1)ರ ಸರ್ಕಾರದ ಆದೇಶದಲ್ಲಿ ಹಿಂದುಳಿದ ವರ್ಗಗಳ ಪ್ರವರ್ಗ 2ಎ, 2ಬಿ, 3ಎ ಮತ್ತು 3ಬಿ ಗಳಿಗೆ ಸೇರಿದ, ತಾಂತ್ರಿಕ ಹಾಗೂ ವೃತ್ತಿಪರ ಶಿಕ್ಷಣದ ಬಿ.ಇ. ಎಂಬಿಬಿಎಸ್, ಬಿಡಿಎಸ್, ಬಿಎಡ್ ಇತ್ಯಾದಿ ಪದವಿ ಕೋರ್ಸುಗಳಲ್ಲಿ ವ್ಯಾಸಂಗ ಮಾಡುತ್ತಿರುವ ವಿದ್ಯಾರ್ಥಿಗಳಿಗೆ "ಊಟದ ವೆಚ್ಚ ನೀಡಿಕೆ" ಕಾರ್ಯಕ್ರಮವನ್ನು 2002-03ನೇ ಸಾಲಿನಿಂದ ಜಾರಿಗೆ ಬರುವಂತೆ ನಿಯಮಗಳನ್ನು ರೂಪಿಸಿ ಆದೇಶ ಹೊರಡಿಸಲಾಗಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಪತ್ರದಲ್ಲಿ ಆಯುಕ್ತರು, ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ, ಬೆಂಗಳೂರು ಇವರು ಸದರಿ ಕಾರ್ಯಕ್ರಮವನ್ನು ತಾಂತ್ರಿಕ ಹಾಗೂ ವೃತ್ತಿಪರ ಶಿಕ್ಷಣದ ಸ್ನಾತಕೋತ್ತರ ಪದವಿ ಕೋರ್ಸುಗಳಲ್ಲಿ (ಎಂಇ, ಎಂಟಿಕೆ, ಎಂಡಿ, ಎಂಎಸ್, ಎಂಡಿಎಸ್, ಎಂಎಡ್ ಇತ್ಯಾದಿ) ವ್ಯಾಸಂಗ ಮಾಡುತ್ತಿರುವ ಹಿಂದುಳಿದ ವರ್ಗಗಳ ಪ್ರವರ್ಗ 2ಎ, 2ಬಿ, 3ಎ ಮತ್ತು 3ಬಿ ಗಳಿಗೆ ಸೇರಿದ ವಿದ್ಯಾರ್ಥಿಗಳಿಗೆ ವಿಸ್ತರಿಸಲು ಕೋರಿ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ: (3)ರ ಪತ್ರದಲ್ಲಿ ಆಯುಕ್ತರು, ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ, ಬೆಂಗಳೂರು ಇವರು ಊಟದ ವೆಚ್ಚ ನೀಡಿಕೆ ಕಾರ್ಯಕ್ರಮದಡಿ ಉಲ್ಲೇಖ (1)ರ ಸರ್ಕಾರದ ಆದೇಶದೊಂದಿಗಿನ ಅನುಬಂಧದಲ್ಲಿ ರೂಪಿಸಲಾದ ನಿಯಮಗಳಲ್ಲಿ ಕಂಡಿಕೆ (7) ರಲ್ಲಿನ ಮೀಸಲಾತಿ ನಿಯಮವನ್ನು ಪರಿಷ್ಕರಿಸಿ ಸರ್ಕಾರದ ಆದೇಶ ಸಂಖ್ಯೆ: ಸಕಇ 79 ಬಿಎಂಎಸ್ 95 ದಿನಾಂಕ: 30.8.95ರ ಆದೇಶದನ್ವಯ ಇಲಾಖೆಯ ಮೆಟ್ರಿಕ್ ಪೂರ್ವ ಹಾಗೂ ಮೆಟ್ರಿಕ್ ನಂತರದ ವಿದ್ಯಾರ್ಥಿವೇತನ ಕಾರ್ಯಕ್ರಮಕ್ಕೆ ನಿಗದಿಪಡಿಸಿರುವ ಪ್ರವರ್ಗವಾರು ಮೀಸಲಾತಿ ಪ್ರಮಾಣವನ್ನು "ಊಟದ ವೆಚ್ಚ" ನೀಡಿಕೆ ಕಾರ್ಯಕ್ರಮಕ್ಕೆ ನಿಗದಿಪಡಿಸಿ ಆದೇಶ ಹೊರಡಿಸಲು ಕೋರಿದ್ದು - ಅದರಂತೆ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಸಕಇ 398 ಬಿಎಂಎಸ್ 2005, ಬೆಂಗಳೂರು, ದಿನಾಂಕ: 21ನೇ ಏಪ್ರಿಲ್ 2006**

ಸರ್ಕಾರವು ಉಲ್ಲೇಖ (2) ಮತ್ತು (3) ರಲ್ಲಿನ ಪ್ರಸ್ತಾವನೆಗಳನ್ನು ಕೂಲಂಕಷವಾಗಿ ಪರಿಶೀಲಿಸಿದೆ. ಪ್ರಸ್ತುತ ಸರ್ಕಾರದ ಆದೇಶ ಉಲ್ಲೇಖ (1) ರನ್ವಯ ಜಾರಿಗೊಳಿಸಲಾಗುತ್ತಿರುವ "ಊಟದ ವೆಚ್ಚ" ನೀಡಿಕೆ ಕಾರ್ಯಕ್ರಮವನ್ನು ತಾಂತ್ರಿಕ ಹಾಗೂ ವೃತ್ತಿಪರ ಕೋರ್ಸುಗಳ ಸ್ನಾತಕೋತ್ತರ ಪದವಿ ಕೋರ್ಸುಗಳಲ್ಲಿ ವ್ಯಾಸಂಗ ಮಾಡುತ್ತಿರುವ (ಎಂ.ಇ. ಎಂಟೆಕ್, ಎಂಎಸ್, ಎಂಡಿ, ಎಂಡಿಎಸ್, ಎಂಎಡ್ ಇತ್ಯಾದಿ) ಹಿಂದುಳಿದ ವರ್ಗಗಳ ಪ್ರವರ್ಗ 2ಎ, 2ಬಿ, 3ಎ ಮತ್ತು 3ಬಿಗಳಿಗೆ ಸೇರಿದ ವಿದ್ಯಾರ್ಥಿಗಳಿಗೆ 2006-07ನೇ ಸಾಲಿನಿಂದ ಜಾರಿಗೆ ಬರುವಂತೆ ವಿಸ್ತರಿಸಿ ಆದೇಶ ಹೊರಡಿಸಲಾಗಿದೆ ಮತ್ತು ಉಲ್ಲೇಖ (1)ರ ಸರ್ಕಾರದ ಆದೇಶದ ಅನುಬಂಧದಲ್ಲಿ ರೂಪಿಸಲಾದ ನಿಯಮಗಳ ಕಂಡಿಕೆ (7) ರಲ್ಲಿನ ಮೀಸಲಾತಿ ನಿಯಮವನ್ನು ಪರಿಷ್ಕರಿಸಿ ಈ ಕೆಳಕಾಣಿಸಿದಂತೆ ಪ್ರವರ್ಗವಾರು ಮೀಸಲಾತಿಗಳನ್ನು ನಿಗದಿಪಡಿಸಿದೆ.

| | |
|---|---|
| ಪ್ರವರ್ಗ - 2ಎ | 54 ಶೇ. |
| ಪ್ರವರ್ಗ - 2ಬಿ | 14 ಶೇ. |
| ಪ್ರವರ್ಗ - 3ಎ | 14 ಶೇ. |
| ಪ್ರವರ್ಗ - 3ಬಿ | 18 ಶೇ. |
| **ಒಟ್ಟು** | **100 ಶೇ.** |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಎ. ಜಾವಿದ್**

ಪಿ.ಆರ್. 713 ಸರ್ಕಾರದ ಅಧೀನ ಕಾರ್ಯದರ್ಶಿ, (ಪ್ರ), ಸಮಾಜ ಕಲ್ಯಾಣ ಇಲಾಖೆ.

**ಒಳಾಡಳಿತ ಸಚಿವಾಲಯ**

**ವಿಷಯ:** ಶ್ರೀ ಕೆ.ಬಿ. ದೇಸಾಯಿ, ಸಹಾಯಕ ಅಭಿಯೋಗ ನಿರ್ದೇಶಕರು, ಗದಗ್ (ಹಿಂದಿನ ಸಹಾಯಕ ಅಭಿಯೋಗ ನಿರ್ದೇಶಕರು, ಕೆ.ಜಿ.ಎಫ್) ಇವರ ವಿರುದ್ಧದ ಆರೋಪಗಳ ಬಗ್ಗೆ ಇಲಾಖಾ ವಿಚಾರಣೆ ನಡೆಸಲು ವಿಚಾರಣಾಧಿಕಾರಿಯನ್ನು ಬದಲಾವಣೆ ಮಾಡುವ ಕುರಿತು.

**ಓದಲಾಗಿದೆ:**
1) ಸರ್ಕಾರದ ಆದೇಶ ಸಂಖ್ಯೆ: ಲಾ 238 ಪಿಪಿಇ 2001, ದಿನಾಂಕ: 28.10.2003.
2) ಸರ್ಕಾರದ ಆದೇಶ ಸಂಖ್ಯೆ: ಲಾ 238 ಪಿಪಿಇ 2001, ದಿನಾಂಕ: 29.3.2004.
3) ಶ್ರೀ ಸಂತಾನಂ, ವಿಚಾರಣಾಧಿಕಾರಿ ಇವರ ಮನವಿ ದಿನಾಂಕ: 18.06.2005.
4) ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರ ಪತ್ರ ಸಂಖ್ಯೆ: ಡಿಪಿಎನ್/ಕೇಂಸ/ಜಿ-52/2000-2001, ದಿನಾಂಕ: 14.07.2005.

**ಪ್ರಸ್ತಾವನೆ:**

ಶ್ರೀ ಕೆ.ಬಿ. ದೇಸಾಯಿ, ಸಹಾಯಕ ಅಭಿಯೋಗ ನಿರ್ದೇಶಕರು, ಗದಗ್ ಇವರು ಈ ಹಿಂದೆ ಕೆ.ಜಿ.ಎಫ್. ನಲ್ಲಿ ಸಹಾಯಕ ಅಭಿಯೋಗ ನಿರ್ದೇಶಕರಾಗಿ ಕಾರ್ಯನಿರ್ವಹಿಸುತ್ತಿದ್ದ ಸಂದರ್ಭದಲ್ಲಿ ಕೆ.ಜಿ.ಎಫ್. ಅಡಿಷನಲ್ ಜೆಎಂಎಫ್‌ಸಿ ನ್ಯಾಯಾಲಯದ ಪ್ರಭಾರ ಸಹಾಯಕ ಸರ್ಕಾರಿ ಅಭಿಯೋಜಕರಾಗಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಇವರ ಮೇಲೆ ಲಂಚಗುಳಿತನ, ಸ್ವಜನ ಪಕ್ಷಪಾತ, ಜಾತೀಯತೆ, ಕರ್ತವ್ಯ ಭ್ರಷ್ಟತೆ ಮುಂತಾದ ದೂರುಗಳು ಬಂದ ಹಿನ್ನೆಲೆಯಲ್ಲಿ ಸದರಿಯವರ ವಿರುದ್ಧ ಶಿಸ್ತು ಕ್ರಮ ಜರುಗಿಸಲು ವಿಚಾರಣೆಯನ್ನು ಮಾಡಲು ಶ್ರೀ ಹೆಚ್. ಸತ್ಯನಾರಾಯಣ ಶೆಟ್ಟಿ, ನಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರನ್ನು ವಿಚಾರಣಾ ಪ್ರಾಧಿಕಾರಿಯನ್ನಾಗಿ ಮೇಲೆ ಓದಲಾದ ಕ್ರಮಾಂಕ (1)ರ ಸರ್ಕಾರದ ಆದೇಶದಲ್ಲಿ ನೇಮಕ ಮಾಡಲಾಗಿತ್ತು.

ಮೇಲೆ ಓದಲಾದ ಕ್ರಮಾಂಕ (2)ರ ಸರ್ಕಾರಿ ಆದೇಶದಲ್ಲಿ ಮೇಲೆ ಓದಲಾದ ಕ್ರಮಾಂಕ (1)ರ ಸರ್ಕಾರಿ ಆದೇಶದಲ್ಲಿ ನೇಮಕ ಮಾಡಲಾಗಿದ್ದ ವಿಚಾರಣಾಧಿಕಾರಿಯನ್ನು ಬದಲಾವಣೆ ಮಾಡಿ, ಸದರಿ ಪ್ರಕರಣದಲ್ಲಿ ವಿಚಾರಣಾಧಿಕಾರಿಯನ್ನಾಗಿ ಶ್ರೀ ಟಿ. ಸಂತಾನಮ್ ಇವರನ್ನು ನೇಮಕ ಮಾಡಲಾಗಿತ್ತು.

ಮೇಲೆ ಓದಲಾದ ಕ್ರಮಾಂಕ (3)ರ ಪತ್ರದಲ್ಲಿ ವಿಚಾರಣಾಧಿಕಾರಿಯಾಗಿರುವ ಶ್ರೀ ಟಿ. ಸಂತಾನಮ್ ಇವರು ಆರೋಪಿ ಅಧಿಕಾರಿಯವರು ವಿಚಾರಣಾಧಿಕಾರಿಯವರನ್ನು ಬದಲಾಯಿಸುವಂತೆ ಮನವಿ ಸಲ್ಲಿಸಿರುವುದರಿಂದ ವಿಚಾರಣೆಯನ್ನು ಮುಂದುವರೆಸಲು ಅಸಾಧ್ಯವಾಗಿರುವುದಾಗಿ ತಿಳಿಸಿರುತ್ತಾರೆ. ಮೇಲೆ ಓದಲಾದ ಕ್ರಮಾಂಕ (4)ರ ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳು ಇವರು ಪತ್ರದಲ್ಲಿ ಬೇರೆ ವಿಚಾರಣಾಧಿಕಾರಿಗಳನ್ನು ನೇಮಕ ಮಾಡುವಂತೆ ಕೋರಿರುತ್ತಾರೆ.

ಈ ಹಿನ್ನೆಲೆಯಲ್ಲಿ ಮೇಲೆ ಓದಲಾದ ಕ್ರಮಾಂಕ (2) ರಲ್ಲಿ ನೇಮಿಸಲಾಗಿದ್ದ ವಿಚಾರಣಾಧಿಕಾರಿಯವರನ್ನು ಬದಲಾಯಿಸಿ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಒಇ 63 ಪಿಪಿಇ 2005, ಬೆಂಗಳೂರು, ದಿನಾಂಕ: 25ನೇ ಏಪ್ರಿಲ್ 2006**

ಶ್ರೀ ಕೆ.ಬಿ. ದೇಸಾಯಿ, ಸಹಾಯಕ ಅಭಿಯೋಗ ನಿರ್ದೇಶಕರು, ಗದಗ್ (ಹಿಂದಿನ ಸಹಾಯಕ ಅಭಿಯೋಗ ನಿರ್ದೇಶಕರು, ಕೆ.ಜಿ.ಎಫ್) ಇವರ ವಿರುದ್ಧದ ಆಪಾದನೆಗಳ ಬಗ್ಗೆ ಕೆ.ಸಿ.ಎಸ್. (ಸಿಸಿಎ) ನಿಯಮಾವಳಿ 1957ರ ನಿಯಮ 11ರ ಉಪನಿಯಮ (2) ರನ್ವಯ ಹಾಗೂ ಸಿಬ್ಬಂದಿ ಮತ್ತು ಸುಧಾರಣೆಯ ಇಲಾಖೆಯ ಆದೇಶ ಸಂಖ್ಯೆ: ಸಿಆಸುಇ 3 ನೇಇವಿ 96, ದಿನಾಂಕ: 24.4.98 ರನ್ವಯ ಇಲಾಖಾ ವಿಚಾರಣೆಯನ್ನು ನಡೆಸಲು ಸದರಿ ನಿಯಮಾವಳಿ ನಿಯಮ 11 ಮತ್ತು 11(ಎ) ರನ್ವಯ ಪ್ರತಿ ಪ್ರಕರಣಕ್ಕೆ ರೂ.5,000 (ರೂಪಾಯಿ ಐದು ಸಾವಿರ) ಗಳ ಸಂಚಿತ ಸಂಭಾವನೆ ಹಾಗೂ ಪ್ರತಿ ಪ್ರಕರಣಕ್ಕೆ ರೂ.1,000 (ಒಂದು ಸಾವಿರ ರೂಪಾಯಿಗಳು ಮಾತ್ರ) ವಾಹನ ಭತ್ಯೆ ನೀಡುವ ಆಧಾರದ ಮೇಲೆ ಶ್ರೀ ಬಿ.ಕೆ. ಕಣವಿ, ನಂ. 1806, 8ನೇ ಮೈನ್, ಜುಡಿಷಿಯಲ್ ಆಫೀಸರ್ಸ್ ಲೇಔಟ್, ಜಿ.ಕೆ.ವಿ.ಕೆ. ಪೋಸ್ಟ್, ಬೆಂಗಳೂರು ಇವರನ್ನು ವಿಚಾರಣಾ ಪ್ರಾಧಿಕಾರಿಯಾಗಿ ಕೆಳಕಂಡ ಷರತ್ತುಗಳೊಂದಿಗೆ ನೇಮಿಸಿದೆ. ಮಂಡನಾಧಿಕಾರಿ ನೇಮಕದ ಬಗ್ಗೆ ಯಾವುದೇ ಬದಲಾವಣೆಯಿಲ್ಲ.

**ಷರತ್ತುಗಳು:**

(1) ಪ್ರಕರಣದ ವಿಚಾರಣೆಯನ್ನು ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ, ಬೆಂಗಳೂರು ಇವರ ಕಾರ್ಯಾಲಯದಲ್ಲಿ ನಡೆಸತಕ್ಕದ್ದು.

(2) ವಿಚಾರಣಾ ಪ್ರಾಧಿಕಾರಿಯವರಿಗೆ ಇಲಾಖಾ ವಿಚಾರಣೆ ಮುಕ್ತಾಯವಾಗುವವರೆಗೆ ಅಭಿಯೋಗ ನಿರ್ದೇಶಕರು ತಮ್ಮ ಕಛೇರಿಯ ಬೆರಳಚ್ಚುಗಾರರು / ಶೀಘ್ರಲಿಪಿಗಾರರ ಸೇವೆಯನ್ನು ಒದಗಿಸುವುದರ ಜೊತೆಗೆ ಅಗತ್ಯ ಲೇಖನ ಸಾಮಗ್ರಿಗಳನ್ನು ಸಹ ಒದಗಿಸತಕ್ಕದ್ದು.

(3) ಇಲಾಖಾ ವಿಚಾರಣೆಯನ್ನು ಎರಡು ತಿಂಗಳೊಳಗೆ ಪೂರೈಸಿ ಸರ್ಕಾರಕ್ಕೆ ವಿಚಾರಣಾ ವರದಿಯನ್ನು ಸಲ್ಲಿಸತಕ್ಕದ್ದು.

(4) ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ, ಬೆಂಗಳೂರು ರವರು ರೂ.5,000-00 ಸಂಚಿತ ಸಂಭಾವನೆಯನ್ನು ಮತ್ತು ರೂ. 1,000-00 ವಾಹನ ಭತ್ಯೆಯನ್ನು ವಿಚಾರಣಾ ಪ್ರಾಧಿಕಾರಿಯವರಿಗೆ ಅವರು ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿದ ನಂತರ ಪಾವತಿಸತಕ್ಕದ್ದು.

(5) ಈ ಸಂಬಂಧ ತಗಲುವ ವೆಚ್ಚವನ್ನು ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯ 2006-07ನೇ ಸಾಲಿನ ಆಯವ್ಯಯದಲ್ಲಿ ಕಛೇರಿ ವೇತನ ಲೆಕ್ಕ ಶೀರ್ಷಿಕೆಯಲ್ಲಿ ಒದಗಿಸಲಾಗಿರುವ ಅನುದಾನದಲ್ಲಿ ಭರಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎ. ಕುಲಕರ್ಣಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಕಾ. ಮತ್ತು ಸು. ಮತ್ತು ಅಭಿಯೋಗಗಳು).

ಪಿ.ಆರ್. 714

**ತಿದ್ದೋಲೆ ಸಂಖ್ಯೆ: ಒಇ 205 ಪಿಪಿಇ 2006, ಬೆಂಗಳೂರು, ದಿನಾಂಕ: 24ನೇ ಏಪ್ರಿಲ್ 2006**

ಸರ್ಕಾರಿ ಆದೇಶ ಸಂಖ್ಯೆ: ಒಇ 542 ಪಿಪಿಇ 2005, ದಿನಾಂಕ: 31ನೇ ಮಾರ್ಚ್ 2006 ರಲ್ಲಿ ನಮೂದಿಸಿರುವರ "ಶ್ರೀ ಬಿ.ವಿ. ರಾಯ್ಕರ್" ಹೆಸರಿಗೆ ಬದಲಾಗಿ "ಶ್ರೀ ವಿ.ಬಿ. ರಾಯ್ಕರ್" ಎಂದು ತಿದ್ದುಪಡಿ ಮಾಡಿ ಓದಿಕೊಳ್ಳತಕ್ಕದ್ದು, ಉಳಿದಂತೆ ಆದೇಶದಲ್ಲಿ ಯಾವುದೇ ಬದಲಾವಣೆ ಇರುವುದಿಲ್ಲ.

**ಆರ್.ಎ. ಕುಲಕರ್ಣಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಕಾ. ಮತ್ತು ಸು. ಮತ್ತು ಅಭಿಯೋಗಗಳು).

ಪಿ.ಆರ್. 718

## ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಸಚಿವಾಲಯ

**ವಿಷಯ:** ಶ್ರೀ ಎಸ್.ವೈ. ದಂಡಣ್ಣನವರ್, ಶಿಶು ಅಭಿವೃದ್ಧಿ ಯೋಜನಾಧಿಕಾರಿ ಬಾಗಲಕೋಟೆ ಇವರಿಗೆ ಸ್ವಯಂ ನಿವೃತ್ತಿ ಹೊಂದಲು ಅನುಮತಿ ನೀಡುವ ಕುರಿತು.

**ಓದಲಾಗಿದೆ:** 1) ಆಯುಕ್ತರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಇವರ ಪತ್ರ ಸಂಖ್ಯೆ: ನಿಸಿಗೆ:8:05-06, ದಿನಾಂಕ: 17.2.2006.

2) ಮಹಾಲೇಖಪಾಲರ ಸಂಖ್ಯೆ: ಪಿವಿ-7:ಪಿವಿ:148 ಮತ್ತು 149:2000-01:899, ದಿನಾಂಕ: 3.2.2005.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ಪತ್ರದಲ್ಲಿ, ಶ್ರೀ ಎಸ್.ವೈ. ದಂಡಣ್ಣನವರ್, ಶಿಶು ಅಭಿವೃದ್ಧಿ ಯೋಜನಾಧಿಕಾರಿ, ಬಾಗಲಕೋಟೆ, ಇವರ ಕೋರಿಕೆಯಂತೆ ಕೆ.ಸಿ.ಎಸ್.ಆರ್ಸ್, ನಿಯಮ 285(1)(ಎ) ರನ್ವಯ ದಿನಾಂಕ: 28.2.2006 ರಿಂದ ಅನ್ವಯವಾಗುವಂತೆ ಸ್ವಯಂ ನಿವೃತ್ತಿ ಹೊಂದಲು ಅನುಮತಿ ನೀಡುವಂತೆ ಕೋರಲಾಗಿದೆ.

ಸದರಿ ಅಧಿಕಾರಿಯು ಗುಂಪು-ಬಿ ವರ್ಗಕ್ಕೆ ಸೇರಿದ್ದು, ಅನಾರೋಗ್ಯದಿಂದ ನರಳುತ್ತಿರುವುದರಿಂದ ಸ್ವಯಂ ನಿವೃತ್ತಿ ಹೊಂದಲು ಮನವಿ ಸಲ್ಲಿಸಿರುತ್ತಾರೆ. ಇವರು ದಿನಾಂಕ: 27.10.1975 ರಂದು ಸರ್ಕಾರಿ ಸೇವೆಗೆ ಸೇರಿದ್ದು, ದಿನಾಂಕ: 31.3.2005ಕ್ಕೆ 29 ವರ್ಷ 5 ತಿಂಗಳು 4 ದಿನಗಳ ಸೇವೆಯನ್ನು ಪೂರೈಸಿರುವರೆಂದು ಮೇಲೆ ಕ್ರಮ ಸಂಖ್ಯೆ (2) ರಲ್ಲಿ ಓದಲಾದ ಪತ್ರದಲ್ಲಿ, ಮಹಾಲೇಖಪಾಲರು ದೃಢೀಕರಿಸಿರುತ್ತಾರೆ. ಸದರಿ ಅಧಿಕಾರಿಯು ಹಿಂದೆ ಕಾರ್ಯನಿರ್ವಹಿಸಿದ್ದ ಕಛೇರಿ:ಸಂಸ್ಥೆಗಳಿಂದ ಬೇಬಾಕಿ ಪ್ರಮಾಣ ಪತ್ರವನ್ನು ಸಲ್ಲಿಸಿದ್ದು, ಸರ್ಕಾರಕ್ಕೆ ಬರಬೇಕಾದ ಯಾವುದೇ ಬಾಕಿ ಇರುವುದಿಲ್ಲವೆಂದು ಮತ್ತು ದಿನಾಂಕ: 1.7.1999 ರಿಂದ 17.7.2000ರ ವರೆಗೆ ಹುನಗುಂದದಲ್ಲಿ ಹಾಗೂ ದಿನಾಂಕ: 18.7.2000 ರಿಂದ ಬಾಗಲಕೋಟೆಯಲ್ಲಿ ಕರ್ತವ್ಯ ನಿರ್ವಹಿಸಿದ ಅವಧಿಯಲ್ಲಿ, ಲೆಕ್ಕ ಪರಿಶೋಧನಾ ಕಾರ್ಯ ಕೈಗೊಂಡು ಪೂರ್ಣವಾದ ನಂತರ ಮಾಹಿತಿಯನ್ನು ಒದಗಿಸುವುದಾಗಿ ಲೆಕ್ಕಾಧಿಕಾರಿಗಳು ತಿಳಿಸಿರುವರೆಂದು ಪ್ರಸ್ತಾವನೆಯಲ್ಲಿ ಸೂಚಿಸಲಾಗಿದೆ. ಶ್ರೀ ಎಸ್.ವೈ. ದಂಡಣ್ಣನವರ್ ಇವರು ಘೋಷಣಾ ಪ್ರಮಾಣಪತ್ರ ನೀಡಿ ಇಲಾಖಾ ಆಡಿಟ್ ವರದಿಯಲ್ಲಾಗಲೀ ಅಥವಾ ಮಹಾಲೇಖಪಾಲರ ಆಡಿಟ್ ವರದಿಯಲ್ಲಾಗಲೀ ತಮ್ಮಿಂದ ಸರ್ಕಾರಕ್ಕೆ ಬರಬೇಕಾದ ಬಾಕಿ ಏನಾದರೂ ಇದ್ದಲ್ಲಿ ಸರ್ಕಾರಕ್ಕೆ ಜಮಾ ಮಾಡಲಾಗುವುದೆಂದು ತಿಳಿಸಿರುತ್ತಾರೆ. ಸದರಿ ಅಧಿಕಾರಿಯ ವಿರುದ್ಧ ಯಾವುದೇ ಶಿಸ್ತು ಕ್ರಮ ಬಾಕಿ ಇರುವುದಿಲ್ಲವೆಂದು ತಿಳಿಸುತ್ತಾ, ಸ್ವಯಂ ನಿವೃತ್ತಿ ಹೊಂದಲು ಅನುಮತಿ ನೀಡುವಂತೆ ಪ್ರಸ್ತಾವನೆಯಲ್ಲಿ ಕೋರಲಾಗಿದೆ.

ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿದ್ದು, ಈ ಕೆಳಗೆ ಸೂಚಿಸಿದಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಮಮಇ 119 ಎಸ್‌ಜೆಡಿ 2006, ಬೆಂಗಳೂರು, ದಿನಾಂಕ: 29ನೇ ಏಪ್ರಿಲ್ 2006**

ಶ್ರೀ ಎಸ್.ವೈ. ದಂಡಣ್ಣನವರ್, ಶಿಶು ಅಭಿವೃದ್ಧಿ ಯೋಜನಾಧಿಕಾರಿ, ಬಾಗಲಕೋಟೆ ಇವರು ಕೆ.ಸಿ.ಎಸ್.ಆರ್ಸ್, ನಿಯಮ 285(1)(ಎ) ರನ್ವಯ, ಇವರು ದಿನಾಂಕ: 1.7.1999 ರಿಂದ 17.7.2000ರ ವರೆಗೆ ಹುನಗುಂದದಲ್ಲಿ ಸಲ್ಲಿಸಿದ ಸೇವಾವಧಿಗೆ ಮತ್ತು ದಿನಾಂಕ: 18.7.2000 ರಿಂದ ಪ್ರಸ್ತುತ ಹುದ್ದೆಯಲ್ಲಿ ಕಾರ್ಯನಿರ್ವಹಿಸುತ್ತಿರುವ ಅವಧಿಗೆ ಸಂಬಂಧಿಸಿದಂತೆ ಲೆಕ್ಕ ಪರಿಶೋಧನೆಯಲ್ಲಿ ಸರ್ಕಾರಕ್ಕೆ ಯಾವುದಾದರೂ ಬರಬೇಕಾದ ಬಾಕಿ

ಗುರುತಿಸಿದ್ದಲ್ಲಿ ಸದರಿ ಮೊತ್ತವನ್ನು ಸರ್ಕಾರಕ್ಕೆ ಜಮಾ ಮಾಡುವ ಷರತ್ತಿಗೊಳಪಟ್ಟು, ದಿನಾಂಕ: 30.4.2006ರ ಅಪರಾಹ್ನದಿಂದ ಜಾರಿಗೆ ಬರುವಂತೆ ಸ್ವಯಂನಿವೃತ್ತಿ ಹೊಂದಲು ಅನುಮತಿ ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ವಿ. ಶಿವಕುಮಾರ್**

ಪಿ.ಆರ್. 721 ಸರ್ಕಾರದ ಅಧೀನ ಕಾರ್ಯದರ್ಶಿ-2,

ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ.

## ಶಿಕ್ಷಣ ಸಚಿವಾಲಯ

**ವಿಷಯ:** 2005-06ನೇ ಶೈಕ್ಷಣಿಕ ಸಾಲಿಗೆ ಬೆಳಗಾವಿಯ ಆದ್ಯ ಶ್ರೀ ನಿಜಲಿಂಗೇಶ್ವರ ಶಿಕ್ಷಣ ಸಂಸ್ಥೆಯ ಬಿ.ಎಡ್ ಕಾಲೇಜಿಗೆ ವಿದ್ಯಾರ್ಥಿ ಪ್ರಮಾಣ ನಿರ್ಧರಣೆ.

**ಉಲ್ಲೇಖ:** 1) ದಿನಾಂಕ: 03.03.2003ರ ಸಂಖ್ಯೆ: ಇಡಿ 275 ಯುಆರ್‌ಸಿ 2003ರ ಸರ್ಕಾರಿ ಆದೇಶ, ದಿನಾಂಕ: 21.12.2005, ಸಂಖ್ಯೆ: F.SRO/NCTE/B.Ed/2005-06/4828ರ NCTE ಯ ಪ್ರಾದೇಶಿಕ ನಿರ್ದೇಶಕರ ಪತ್ರ.

**ಪೀಠಿಕೆ:**

1) ಸರ್ಕಾರಿ/ವಿಶ್ವವಿದ್ಯಾಲಯ/ಅನುದಾನಿತ ಖಾಸಗಿ ಶಿಕ್ಷಣ ಕಾಲೇಜುಗಳಲ್ಲಿ ನಡೆಸಲಾಗುತ್ತಿರುವ ಬಿ.ಇಡಿ/ಬಿ.ಪಿ.ಎಡ್, ಕೋರ್ಸಿನ ವಿದ್ಯಾರ್ಥಿ ಪ್ರಮಾಣವನ್ನು ಪ್ರತಿ ಶೈಕ್ಷಣಿಕ ವರ್ಷಕ್ಕೆ ಅನ್ವಯವಾಗುವಂತೆ ಎನ್.ಸಿ.ಟಿ.ಇ. ಅಧಿನಿಯಮ 1993ರ 14ನೇ ಪ್ರಕರಣದಡಿ ಎನ್‌ಸಿಟಿಇ ಮಂಜೂರು ಮಾಡುವ ವಿದ್ಯಾರ್ಥಿ ಪ್ರಮಾಣವನ್ನು ಕೆ.ಎಸ್.ಯು, ಅಧಿನಿಯಮದ 59(18)ನೇ ಪ್ರಕರಣದಡಿ ಓದಲಾದ ಕಾಲಕಾಲಕ್ಕೆ ತಿದ್ದುಪಡಿಯಾದ ಕರ್ನಾಟಕ ಬಿ.ಇಡಿ. ಕೋರ್ಸುಗಳಿಗೆ ವಿದ್ಯಾರ್ಥಿಗಳ ಪ್ರವೇಶಕ್ಕೆ ಅಭ್ಯರ್ಥಿಗಳ ಆಯ್ಕೆ ನಿಯಮಾವಳಿಗಳು, 1999ರ 2(1)ನೇ ನಿಯಮದಡಿ ಸರ್ಕಾರವು ನಿಗದಿಪಡಿಸುತ್ತಿದೆ.

2) ಉಲ್ಲೇಖ (1) ರಲ್ಲಿರುವ ಸರ್ಕಾರಿ ಆದೇಶದಲ್ಲಿ ಬೆಳಗಾವಿಯ ಆದ್ಯ ಶ್ರೀ ನಿಜಲಿಂಗೇಶ್ವರ ಶಿಕ್ಷಣ ಸಂಸ್ಥೆಯ ಬಿ.ಎಡ್ ಕಾಲೇಜು, ಅನಂತ್ ವಿದ್ಯಾ ನಗರ್, ಪಿ.ಬಿ. ನಂ.16, ಸಂಕೇಶ್ವರ-591 313, ಬೆಳಗಾಂ, ಈ ಕಾಲೇಜಿಗೆ ಬಿ.ಎಡ್ ಕೋರ್ಸನ್ನು 100 (ಒಂದು ನೂರು ಮಾತ್ರ) ವಿದ್ಯಾರ್ಥಿ ಪ್ರಮಾಣದೊಂದಿಗೆ ಪ್ರಾರಂಭಿಸಲು ನಿರಾಕ್ಷೇಪಣಾ ಪತ್ರವನ್ನು ನೀಡಲಾಗಿತ್ತು. ಉಲ್ಲೇಖ (2) ರಲ್ಲಿರುವ ದಿನಾಂಕ: 04.01.2006ರ ಆದೇಶದಲ್ಲಿ ಎನ್‌ಸಿಟಿಇಯು ಸದರಿ ಕಾಲೇಜಿನ ಬಿ.ಎಡ್ ಕೋರ್ಸಿಗೆ 2005-06ನೇ ಸಾಲಿನಿಂದ ಅನ್ವಯವಾಗುವಂತೆ 100 (ಒಂದು ನೂರು ಮಾತ್ರ) ವಿದ್ಯಾರ್ಥಿ ಪ್ರಮಾಣದೊಂದಿಗೆ ಅನುಮೋದನೆ ನೀಡಿದ್ದು, ಉಲ್ಲೇಖ (3) ರಲ್ಲಿರುವ ದಿನಾಂಕ: 22.02.2006ರ ಪತ್ರದಲ್ಲಿ ಸದರಿ ಕಾಲೇಜಿನ ಪ್ರಾಂಶುಪಾಲರು ತಮ್ಮ ಕಾಲೇಜಿನಲ್ಲಿ ಬಿ.ಎಡ್ ಕೋರ್ಸನ್ನು ಪ್ರಾರಂಭಿಸಲು ಮಂಜೂರಾತಿಯನ್ನು ನೀಡುವಂತೆ ಕೋರಿರುತ್ತಾರೆ. ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 34 ಯುಆರ್‌ಸಿ 2006, ಬೆಂಗಳೂರು, ದಿನಾಂಕ: 20ನೇ ಏಪ್ರಿಲ್ 2006**

3) ಕರ್ನಾಟಕ ರಾಜ್ಯ ವಿಶ್ವವಿದ್ಯಾಲಯಗಳ ಅಧಿನಿಯಮ 2000ದ 59ನೇ ಪ್ರಕರಣದ 18ನೇ ಉಪ ಪ್ರಕರಣದೊಂದಿಗೆ ಓದಲಾದ ಕರ್ನಾಟಕ ಬಿ.ಎಡ್. ಕೋರ್ಸುಗಳಿಗೆ ಅಭ್ಯರ್ಥಿಗಳ ಆಯ್ಕೆ ನಿಯಮಗಳು 1999ರ 2(1)ನೇ ನಿಯಮದಡಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಬೆಳಗಾವಿಯ ಆದ್ಯ ಶ್ರೀ ನಿಜಲಿಂಗೇಶ್ವರ ಶಿಕ್ಷಣ ಸಂಸ್ಥೆಯ ಬಿ.ಎಡ್ ಕಾಲೇಜು, ಅನಂತ್ ವಿದ್ಯಾ ನಗರ್, ಪಿ.ಬಿ. ನಂ.16, ಸಂಕೇಶ್ವರ-591 313, ಬೆಳಗಾಂ, ಈ ಕಾಲೇಜಿನ ಬಿ.ಎಡ್. ಕೋರ್ಸಿಗೆ 2005-06ನೇ ಶೈಕ್ಷಣಿಕ ಸಾಲಿನಿಂದ ಅನ್ವಯವಾಗುವಂತೆ 100 (ಒಂದು ನೂರು ಮಾತ್ರ) ವಿದ್ಯಾರ್ಥಿ ಪ್ರಮಾಣವನ್ನು ನಿಗದಿಪಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಪಿ. ಮಂಜುನಾಥ್**

ಪಿ.ಆರ್. 728 ಸರ್ಕಾರದ ಅಧೀನ ಕಾರ್ಯದರ್ಶಿ, ಶಿಕ್ಷಣ ಇಲಾಖೆ (ವಿಶ್ವವಿದ್ಯಾಲಯಗಳು).

**ವಿಷಯ:** ಶ್ರೀ ಬಿ. ರಾಮರಾವ್, ನಿವೃತ್ತ ಪ್ರಾಂಶುಪಾಲರು ಡಯಟ್ ಬಳ್ಳಾರಿ, ಅವರು ಎಸಗಿದರೆನ್ನಲಾದ ಆರೋಪಗಳ ಬಗ್ಗೆ ಅಂತಿಮ ಆದೇಶ.

**ಓದಲಾಗಿದೆ:**
1) ಸರ್ಕಾರಿ ಆದೇಶ ಸಂಖ್ಯೆ: ಇಡಿ 88 ಡಿಜಿಡಿ 2002, ದಿನಾಂಕ: 20.12.2003.
2) ಶ್ರೀ ಬಿ. ರಾಮರಾವ್ ಇವರ ಲಿಖಿತ ಹೇಳಿಕೆ ದಿನಾಂಕ: 22.2.2005.
3) ಕಾರ್ಯದರ್ಶಿ, ಪ್ರಾದೇಶಿಕ ಪ್ರೌಢಶಿಕ್ಷಣ ಪರೀಕ್ಷಾ ಮಂಡಳಿ ಹಾಗೂ ಪದನಿಮಿತ್ತ ಸಹನಿರ್ದೇಶಕರ ಕಚೇರಿ, ಸಾ.ಶಿ.ಇಲಾಖೆ, ಗುಲ್ಬರ್ಗಾ ವಿಭಾಗ, ಗುಲ್ಬರ್ಗಾ ಇವರ ಪತ್ರ ಸಂಖ್ಯೆ: ಆಪ್ತಶಾಖೆ:ಪ್ರಡ.ಬಳ್ಳಾರಿ:ದೂರು:04-05 ವಿಚಾರಣಾ ವರದಿ ದಿನಾಂಕ: 5.3.2005.
4) 2ನೇ ಕಾರಣ ಕೇಳುವ ನೋಟೀಸ್ ಸಂಖ್ಯೆ: ಇಡಿ 88 ಡಿಜಿಡಿ 2002, ದಿನಾಂಕ: 3.11.2005.
5) ಶ್ರೀ ಬಿ. ರಾಮರಾವ್, ಇವರಿಂದ 2ನೇ ಕಾರಣ ಕೇಳುವ ನೋಟೀಸಿಗೆ ಪ್ರತಿ ರಕ್ಷಣಾ ಹೇಳಿಕೆ ದಿ: 14.11.2005.

**ಪ್ರಸ್ತಾವನೆ:**

ಶ್ರೀ ಬಿ. ರಾಮರಾವ್, ನಿವೃತ್ತ ಪ್ರಾಂಶುಪಾಲರು ಡಯಟ್ ಬಳ್ಳಾರಿ, ಇವರು ಪ್ರಾಂಶುಪಾಲರಾಗಿ ಕಾರ್ಯನಿರ್ವಹಿಸುತ್ತಿದ್ದಾಗ ಬಳ್ಳಾರಿ ಡಯಟ್ ಹಂತದಲ್ಲಿ ನಡೆಯುತ್ತಿದ್ದ ತರಬೇತಿಗಳಿಗೆ ಅಗತ್ಯವಿರುವ ಸಾಮಗ್ರಿಗಳನ್ನು ಖರೀದಿಸುವಲ್ಲಿ ಖರೀದಿ ನಿಯಮಗಳನ್ನು ಉಲ್ಲಂಘಿಸಿ ಮುಕ್ತ ಮಾರುಕಟ್ಟೆಯಿಂದ ಸಾಮಗ್ರಿಗಳನ್ನು ಖರೀದಿಸಿದ್ದು, ಈ ಮೂಲಕ ನಕಲಿ ರಶೀದಿಗಳನ್ನು ನಿರ್ವಹಿಸಿ ಸರ್ಕಾರಿ ಹಣ ದುರುಪಯೋಗಪಡಿಸಲು ನೇರ ಕಾರಣರಾಗಿದ್ದು, ಸರ್ಕಾರದ ಖರೀದಿ ಆದೇಶಗಳು ಮತ್ತು ಇಲಾಖೆಯ ಮಾರ್ಗದರ್ಶಿ ಸುತ್ತೋಲೆಗಳನ್ನು ಪರಾಮರ್ಶಿಸದೆ ನಿಯಮಗಳ ವಿರುದ್ಧ ಕಾರ್ಯನಿರ್ವಹಿಸಿ, ತಮ್ಮ ಸೇವಾ ಅವಧಿಯಲ್ಲಿ ಹಣಕಾಸಿನ ಅವ್ಯವಹಾರ, ಕರ್ತವ್ಯಲೋಪ, ಅಪ್ರಮಾಣೀಕತೆ ಎಸಗುವ ಮೂಲಕ ದುರ್ನಡತೆ ಎಸಗಿರುವುದು ಮೇಲ್ನೋಟಕ್ಕೆ ನಿಜವೆಂದು ಕಂಡುಬಂದ ಹಿನ್ನೆಲೆಯಲ್ಲಿ ಮೇಲೆ ಓದಲಾದ ಕ್ರಮ ಸಂಖ್ಯೆ: (1)ರ ದಿನಾಂಕ: 20.12.2003ರ ಆದೇಶದ

ಮೂಲಕ ಕೆಸಿಎಸ್ಆರ್ ನಿಯಮ 214 ರಡಿಯಲ್ಲಿ ಅವರ ವಿರುದ್ಧ ವಿಚಾರಣೆ ನಡೆಸಲು ಸರ್ಕಾರದ ಮಂಜೂರಾತಿ ಆದೇಶ ನೀಡಲಾಗಿದೆ. ಅದರಂತೆ ವಿಚಾರಣಾಧಿಕಾರಿಗಳು ವಿಚಾರಣೆಯನ್ನು ನಡೆಸಿ ದಿನಾಂಕ: 5.3.2005 ರಂದು ವಿಚಾರಣಾವರದಿಯನ್ನು ಸಲ್ಲಿಸಿರುತ್ತಾರೆ. ಇವರ ಮೇಲಿನ ಆರೋಪಗಳಲ್ಲಿ ಕೆಲವು ಆರೋಪಗಳು ಸಾಬೀತಾಗಿದೆ ಎಂದು ವರದಿ ನೀಡಿದ್ದರಿಂದ ಸದರಿ ಇಲಾಖಾವಿಚಾರಣಾ ವರದಿಯ ಪ್ರತಿಯೊಂದಿಗೆ ಮೇಲೆ (4) ರಲ್ಲಿ ಓದಲಾದ 2ನೇ ಕಾರಣ ಕೇಳುವ ನೋಟೀಸನ್ನು ಹೊರಡಿಸಲಾಗಿದೆ. ಇದಕ್ಕೆ ಶ್ರೀ ಬಿ. ರಾಮರಾವ್ ರವರು ದಿನಾಂಕ: 14.11.2005 ರಂದು ನೀಡಿದ ಪ್ರತಿರಕ್ಷಣಾ ಹೇಳಿಕೆಯನ್ನು ಇಲಾಖಾ ವಿಚಾರಣಾ ದಾಖಲೆಗಳೊಂದಿಗೆ ಪರಿಶೀಲಿಸಲಾಗಿದ್ದು ಅವರು ಯಾವುದೇ ಹೊಸದಾದ ಅಂಶಗಳನ್ನು ಮಂಡಿಸದೇ ಇರುವುದರಿಂದ ಅವರು ಸೇವೆಯಲ್ಲಿದ್ದಾಗ ಮಾಡಿದರೆನ್ನಲಾದ ದುರ್ನಡತೆಗೆ ಅನುಗುಣವಾಗಿ ಅವರ ನಿವೃತ್ತಿ ವೇತನದಿಂದ ತಿಂಗಳಿಗೆ 250/- ರೂ.ನಂತೆ 2 ವರ್ಷದ ಅವಧಿಗೆ ಕಟಾಯಿಸಲು ನಿರ್ಧರಿಸಿದ್ದು ಕರ್ನಾಟಕ ನಾಗರೀಕ ಸೇವಾ ನಿಯಮ 214 ರನ್ವಯ ಕರ್ನಾಟಕ ಲೋಕಸೇವಾ ಆಯೋಗದೊಂದಿಗೆ ಸಮಾಲೋಚಿಸಿ ಈ ಕೆಳಕಂಡಂತೆ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 88 ಡಿಜಿಡಿ 2002, ಬೆಂಗಳೂರು, ದಿನಾಂಕ: 4ನೇ ಮೇ 2006**

ಪ್ರಸ್ತಾವನೆಯಲ್ಲಿ ವಿವರಿಸಲಾದ ಕಾರಣಗಳ ಹಿನ್ನಲೆಯಲ್ಲಿ ಶ್ರೀ ಬಿ. ರಾಮರಾವ್, ನಿವೃತ್ತ ಪ್ರಾಂಶುಪಾಲರು, ಡಯಟ್ ಬಳ್ಳಾರಿ, ಸರ್ಕಾರವು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು 1957ರ ನಿಯಮ 11 ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ಬಿ. ರಾಮರಾವ್, ನಿವೃತ್ತ ಪ್ರಾಂಶುಪಾಲರು, ಡಯಟ್ ಬಳ್ಳಾರಿ, ರವರ ನಿವೃತ್ತಿ ವೇತನದಿಂದ ತಿಂಗಳಿಗೆ ರೂ.250/- (ರೂ.ಎರಡುನೂರ ಐವತ್ತು ಮಾತ್ರ) ರಂತೆ 2(ಎರಡು) ವರ್ಷಗಳ ಅವಧಿಗೆ ಕಟಾವು ಮಾಡಲು ಆದೇಶಿಸಿದೆ.

ಈ ಆದೇಶವನ್ನು ಕರ್ನಾಟಕ ಲೋಕಸೇವಾ ಆಯೋಗದ ಪತ್ರದ ಸಂಖ್ಯೆ: ಪಿ.ಎಸ್.ಸಿ 231 ಸಿಎನ್ಎಸ್ 2005 ದಿನಾಂಕ: 21.4.2000ರ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸ್ವರ್ಣಲತ ಎಂ. ಭಂಡಾರೆ**

ಪಿ.ಆರ್. 729 ಸರ್ಕಾರದ ಅಧೀನ ಕಾರ್ಯದರ್ಶಿ, ಶಿಕ್ಷಣ ಇಲಾಖೆ (ಸೇ-1,2).

## ಕನ್ನಡ ಮತ್ತು ಸಂಸ್ಕೃತಿ ಸಚಿವಾಲಯ

**ವಿಷಯ:** ನವದೆಹಲಿಯ ರಾಷ್ಟ್ರೀಯ ಹಸ್ತಪ್ರತಿ ಅಭಿಯಾನ ಏರ್ಪಡಿಸಿರುವ ದಕ್ಷಿಣ ಭಾರತದ, ಎಂ.ಸಿ.ಸಿ. ಕಾರ್ಯಕರ್ತ ಸಭೆಯಲ್ಲಿ ಭಾಗವಹಿಸಲು ಅನುಮತಿ ಕೋರಿ.

**ಓದಲಾಗಿದೆ:**
1) ರಾಷ್ಟ್ರೀಯ ಹಸ್ತಪ್ರತಿ ಅಭಿಯಾನ, ನವದೆಹಲಿ ಇವರ ಪತ್ರ ಸಂಖ್ಯೆ: ಎನ್.ಎಂ.ಎಂ/1/ಜನರಲ್/2006, ದಿನಾಂಕ: 5.4.2006.-
2) ಕರ್ನಾಟಕ ರಾಜ್ಯ ಪತ್ರಾಗಾರ ನಿರ್ದೇಶನಾಲಯ, ನಿರ್ದೇಶಕರ ಪತ್ರ ಸಂಖ್ಯೆ: ಎಆರ್ಎಸ್ 2 ಡಿಎಪಿ 2005-06, ದಿನಾಂಕ: 24.04.2006.

**ಪ್ರಸ್ತಾವನೆ:**

ರಾಷ್ಟ್ರೀಯ ಹಸ್ತಪ್ರತಿ ಅಭಿಯಾನ ಸೆಮಿನಾರ್‌ನಲ್ಲಿ ದಿನಾಂಕ: 02.05.2006 ರಿಂದ 05.05.2006 ರವರೆಗೆ ಹಸ್ತಪ್ರತಿಗಳ ಸಂರಕ್ಷಣೆ ಬಗ್ಗೆ ಒಂದು ಸೆಮಿನಾರ್ ಹಮ್ಮಿಕೊಂಡಿದ್ದು, ರಾಜ್ಯ ಪತ್ರಾಗಾರ ಇಲಾಖೆಯ ಅಭಿವೃದ್ಧಿ ಕುರಿತು ಚರ್ಚಿಸಲಾಗುವುದು ಮತ್ತು ಇಲಾಖೆಯ ಕಡತಗಳ ಕುರಿತು ಏರ್ಪಡಿಸುವ ಸೆಮಿನಾರ್ ಬಗ್ಗೆಯು ಸಹಾ ಚರ್ಚಿಸಲಾಗುವುದು. ದಿನಾಂಕ: 02.05.2006 ರಿಂದ 05.05.2006 ರವರೆಗೆ ನಡೆಯಲಿರುವ ಸೆಮಿನಾರ್‌ನಲ್ಲಿ ಭಾಗವಹಿಸಲು ತಮಗೆ ಅನುಮತಿ ನೀಡುವಂತೆ ರಾಜ್ಯ ಪತ್ರಾಗಾರ ನಿರ್ದೇಶನಾಲಯದ ನಿರ್ದೇಶಕರು ಮೇಲೆ (2) ರಲ್ಲಿ ಓದಲಾದ ದಿನಾಂಕ: 24.04.2006ರ ಪತ್ರದಲ್ಲಿ ಕೋರಿರುತ್ತಾರೆ. ಇದನ್ನು ಪರಿಶೀಲಿಸಿದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಂಕಇ 9 ರಾಪಸಿ 2006, ಬೆಂಗಳೂರು, ದಿನಾಂಕ: 2ನೇ ಮೇ 2006**

ರಾಷ್ಟ್ರೀಯ ಹಸ್ತಪ್ರತಿ ಅಭಿಯಾನ ನವದೆಹಲಿ ದಿನಾಂಕ: 02.05.2006 ರಿಂದ 05.05.2006 ರವರೆಗೆ ಸೆಮಿನಾರ್‌ನಲ್ಲಿ ಭಾಗವಹಿಸಲು ನವದೆಹಲಿಗೆ ಹೋಗಿ ಬರಲು ಕರ್ನಾಟಕ ರಾಜ್ಯ ಪತ್ರಾಗಾರ ನಿರ್ದೇಶನಾಲಯದ ನಿರ್ದೇಶಕರಿಗೆ ಅನುಮತಿ ನೀಡಲಾಗಿದೆ. ಈ ಪ್ರಯಾಣದ ವೆಚ್ಚವನ್ನು ಸರ್ಕಾರದಿಂದ ಭರಿಸಲಾಗುವುದಿಲ್ಲ ಎಂಬ ಷರತ್ತಿಗೆ ಈ ಅನುಮತಿ ಒಳಪಟ್ಟಿದೆ.

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ: 10.07.1996 ರಲ್ಲಿ ಇಲಾಖಾ ಪ್ರಧಾನ ಕಾರ್ಯದರ್ಶಿಯವರಿಗೆ ಪ್ರದತ್ತವಾದ ಅಧಿಕಾರದನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎಸ್. ಶಿವರಾಮ್**

ಪಿ.ಆರ್. 734 ಸರ್ಕಾರದ ಅಧೀನ ಕಾರ್ಯದರ್ಶಿ,

ಕನ್ನಡ ಮತ್ತು ಸಂಸ್ಕೃತಿ ಇಲಾಖೆ (ಆಡಳಿತ ಕನ್ನಡ).

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಗೃಹಪರಿಚಾರಕ ಭತ್ಯೆಯನ್ನು ಹೆಚ್ಚಿಸುವ ಬಗ್ಗೆ.

**ಓದಲಾಗಿದೆ:**
1) ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 17 ಎಸ್ಆರ್‌ಪಿ (1) 61, ದಿನಾಂಕ: 27.02.1961.
2) ಸರ್ಕಾರಿ ಆದೇಶ ಸಂಖ್ಯೆ: ಡಿಪಿಎಆರ್ 73 ಸಿಡಿಎ 78 ದಿನಾಂಕ: 15.05.1980.
3) ಸರ್ಕಾರಿ ಆದೇಶ ಸಂಖ್ಯೆ: ಡಿಪಿಎಆರ್ 40 ಸಿಡಿಎ 85 (ಪಿ), ದಿನಾಂಕ: 02.05.1987.
4) ಸರ್ಕಾರಿ ಆದೇಶ ಸಂಖ್ಯೆ: ಡಿಪಿಎಆರ್ 34 ಸಿಸೇನಿ 96, ದಿನಾಂಕ: 24.04.1997.
5) ಸರ್ಕಾರಿ ಆದೇಶ ಸಂಖ್ಯೆ: ಡಿಪಿಎಆರ್ 34 ಸಿಸೇನಿ 96, ದಿನಾಂಕ: 16.09.1997.
6) ತಿದ್ದುಪಡಿ ಆದೇಶ ಸಂಖ್ಯೆ: ಸಿಆಸುಇ 34 ಸಿಸೇನಿ 96, ದಿನಾಂಕ: 01.06.1998.

**ಪ್ರಸ್ತಾವನೆ:**

ಮೇಲಿನ ಕ್ರಮ ಸಂಖ್ಯೆ (1) ರಲ್ಲಿನ ಆದೇಶ ದಿನಾಂಕ: 27.02.1961 ರಲ್ಲಿ ಮಂಜೂರಾತಿಯಾಗಿರುವ ಇತರೇ ವಿಷಯಗಳ ಜೊತೆಯಲ್ಲಿ ಸರ್ಕಾರದ ಕಾರ್ಯದರ್ಶಿಗಳು, ಇಲಾಖಾ ಮುಖ್ಯಸ್ಥರು ಹಾಗೂ ಜಿಲ್ಲಾಧಿಕಾರಿಗಳಿಗೆ ಗೃಹಪರಿಚಾರಕ ಸೇವೆ ಉಪಯೋಗಿಸಿಕೊಳ್ಳಲು ಮಂಜೂರಾತಿ ನೀಡಲಾಗಿತ್ತು. ಮೇಲಿನ ಕ್ರಮ ಸಂಖ್ಯೆ (2) ರಲ್ಲಿನ ಆದೇಶ ದಿನಾಂಕ: 15.05.1980 ರಲ್ಲಿ ಗೃಹಪರಿಚಾರಕ ಸೇವೆಯನ್ನು ಪಡೆಯಲು ಹಲವು ಷರತ್ತುಗಳನ್ನು ವಿಧಿಸಲಾಗಿದೆ.

ಮೇಲಿನ ಕ್ರಮ ಸಂಖ್ಯೆ (3)ರ ಆದೇಶ ದಿನಾಂಕ: 02.05.1987 ರಲ್ಲಿ ಸರ್ಕಾರದ ಕಾರ್ಯದರ್ಶಿಗಳು, ಇಲಾಖಾ ಮುಖ್ಯಸ್ಥರು ಹಾಗೂ ಜಿಲ್ಲಾಧಿಕಾರಿಗಳ ವರ್ಗಕ್ಕೆ ಸೇರಿದಂತಹ ಅಧಿಕಾರಿಗಳಿಗೆ ಈಗಾಗಲೇ ನೀಡುತ್ತಿರುವ ಗೃಹಪರಿಚಾರಕ ಭತ್ಯೆ ಸೌಲಭ್ಯವನ್ನು ಜಿಲ್ಲಾ ಪರಿಷತ್ತುಗಳ ಮುಖ್ಯ ಕಾರ್ಯದರ್ಶಿಗಳಿಗೂ ವಿಸ್ತರಿಸಲಾಗಿದೆ. ಮೇಲಿನ ಕ್ರಮ ಸಂಖ್ಯೆ (4) ಮತ್ತು (5) ರಲ್ಲಿನ ಆದೇಶ ದಿನಾಂಕ: 24.04.1997, 16.09.1997 ರಲ್ಲಿ ಗೃಹ ಪರಿಚಾರಕ ಭತ್ಯೆಯನ್ನು ಕಾಲಕಾಲಕ್ಕೆ ಪರಿಶೀಲಿಸಿ ಅಂತಿಮವಾಗಿ ಮಾಹೆಯಾನ ರೂ.700-00 ಗಳನ್ನು ನಿಗದಿಪಡಿಸಲಾಗಿದೆ.

ಮೇಲಿನ ಕ್ರಮ ಸಂಖ್ಯೆ (6) ರಲ್ಲಿನ ತಿದ್ದುಪಡಿ ಆದೇಶ ದಿನಾಂಕ: 01.06.1998 ರಲ್ಲಿ ಕಾರ್ಯದರ್ಶಿಗಳಿಗೆ ಎಂಬುದನ್ನು ಸರ್ಕಾರದ ಕಾರ್ಯದರ್ಶಿಗಳಿಗೆ / ವಿಶೇಷ ಕಾರ್ಯದರ್ಶಿಗಳಿಗೆ / ಅಪರ ಕಾರ್ಯದರ್ಶಿಗಳಿಗೂ ಸಹ ಎಂದು ಸ್ಪಷ್ಟೀಕರಿಸಿ ಅವರುಗಳಿಗೂ ಸಹ ಈ ಸೌಲಭ್ಯ ವಿಸ್ತರಿಸಲಾಗಿದೆ.

ಪ್ರಸ್ತುತ ನೀಡುತ್ತಿರುವ ಗೃಹ ಪರಿಚಾರಕ ಭತ್ಯೆ ಮಾಹೆಯಾನ ರೂ.700-00 ಗಳನ್ನು 1997 ರಲ್ಲಿ ಪರಿಷ್ಕರಿಸಿದ್ದು, ಇದುವರೆವಿಗೂ ಈ ಭತ್ಯೆಯನ್ನು ಹೆಚ್ಚಿಸದೇ ಇರುವುದರಿಂದ ಹಾಗೂ ಜೀವನ ನಿರ್ವಹಣೆ ವೆಚ್ಚ ಹೆಚ್ಚಾಗಿರುವ ಹಿನ್ನೆಲೆಯಲ್ಲಿ, ಈ ಭತ್ಯೆಯನ್ನು ಪರಿಷ್ಕರಿಸಲು ಕೋರಿ ಹಲವು ಮನವಿಗಳು ಸ್ವೀಕೃತವಾಗಿವೆ. ಈ ಹಿನ್ನೆಲೆಯಲ್ಲಿ ಪ್ರಸ್ತಾವನೆಯನ್ನು ಪರಿಶೀಲಿಸಿ ಸದರಿ ಭತ್ಯೆಯನ್ನು ಮಾಹೆಯಾನ ರೂ.700-00 ರಿಂದ ರೂ.1500-00 ಗಳಿಗೆ ಹೆಚ್ಚಿಸುವುದು ಅವಶ್ಯಕವೆಂದು ತೀರ್ಮಾನಿಸಲಾಗಿದೆ. ಕಾರಣ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 196 ಸಿಸೇನಿ 2001, ಬೆಂಗಳೂರು, ದಿನಾಂಕ: 6ನೇ ಮೇ 2006**

ಸರ್ಕಾರಿ ಆದೇಶ ಸಂಖ್ಯೆ: ಡಿಪಿಎಆರ್ 73 ಸಿಡಿಎ 78, ದಿನಾಂಕ: 15.05.1980 ರಲ್ಲಿ ನಿಗದಿಪಡಿಸಿರುವ ಷರತ್ತುಗಳಿಗೆ ಒಳಪಟ್ಟು ಸರ್ಕಾರದ ಕಾರ್ಯದರ್ಶಿಗಳಿಗೆ / ವಿಶೇಷ ಕಾರ್ಯದರ್ಶಿಗಳಿಗೆ / ಅಪರ ಕಾರ್ಯದರ್ಶಿಗಳಿಗೆ, ಇಲಾಖಾ ಮುಖ್ಯಸ್ಥರಿಗೆ ಹಾಗೂ ಜಿಲ್ಲಾಧಿಕಾರಿಗಳಿಗೆ ಮತ್ತು ಚಾಲ್ತಿಯಲ್ಲಿರುವ ಸರ್ಕಾರಿ ಆದೇಶಗಳ ಪ್ರಕಾರ ಪ್ರಸ್ತುತ ಗೃಹ ಪರಿಚಾರಕ ಭತ್ಯೆಯನ್ನು ಪಡೆಯಲು ಗುರುತಿಸಿರುವ ಹುದ್ದೆಗಳಲ್ಲಿ ಕಾರ್ಯನಿರ್ವಹಿಸುತ್ತಿದ್ದು, ಪ್ರಸ್ತುತ ಸದರಿ ಭತ್ಯೆಯನ್ನು ಪಡೆಯುತ್ತಿರುವ ಅಧಿಕಾರಿಗಳು ಒಳಗೊಂಡಂತೆ (ನ್ಯಾಯಾಲಯದ ಅಧಿಕಾರಿಗಳನ್ನು ಹೊರತುಪಡಿಸಿ) ಗೃಹ ಪರಿಚಾರಕ ಭತ್ಯೆಯನ್ನು ಮಾಹೆಯಾನ ರೂ.700-00 ಗಳಿಂದ ರೂ.1500-00 ಗಳಿಗೆ ಹೆಚ್ಚಿಸಲು ಮಂಜೂರಾತಿ ನೀಡಿದೆ. ಈ ಆದೇಶವು ದಿನಾಂಕ: 01.04.2006 ರಿಂದ ಜಾರಿಗೆ ಬರುತ್ತದೆ.

ಈ ಆದೇಶವನ್ನು ಅನಧಿಕೃತ ಟಿಪ್ಪಣಿ ಸಂಖ್ಯೆ: ಎಫ್‌ಡಿ 12 ಎಸ್‌ಆರ್‌ಪಿ 2005, ದಿನಾಂಕ: 19.04.2006 ರಲ್ಲಿನ ಆರ್ಥಿಕ ಇಲಾಖೆಯ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಪರಂಧಾಮಯ್ಯ**
ಪಿ.ಆರ್. 739
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಆಡಳಿತ-3).

**FOREST, ECOLOGY AND ENVIRONMENT SECRETARIAT**

**CORRIGENDUM No. FEE 208 FGL 2005, Bangalore, Dated: 7th April 2006**

In the Order portion of the G.O. No. FEE 281 FGL 2000, dated: 6.10.2003 in the existing fourth line in between the words "4.917 ha. of forest land" and "in Shikaripura Range" the words "as detailed below" shall be deemed to have been inserted.

| Sl. No. | Name of the Village | Sy.No. | Lenth of the line through Forest area in KM. | Extent of Forest area required in Hectares. | Remarks |
|---|---|---|---|---|---|
| 1 | Jakkanahally | 13,12,11 | 0.82 Km. | 1.804 | Kuthralli Forest, Shikaripura Range Sagar Division, |
| 2 | Kutralli | 91 | 1.38 Km. | 3.036 | Jamboor M.F. |
| 3 | Tadagani | 82 | 0.035 Km. | 0.077 | Shiralakoppa R.F. |

By Order and in the name of the Governor of Karnataka,
**S.R. VATSALA**
P.R. 749
Under Secretary to Government,
Forest, Ecology and Environment Department.

**ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ**

**ವಿಷಯ:** ಬಾಲಬ್ರೂಯಿ ಅತಿಥಿ ಗೃಹದಲ್ಲಿನ ಅವ್ಯವಹಾರದಲ್ಲಿ ಭಾಗಿಯಾದ ನೌಕರರ ವಿರುದ್ಧ ಶಿಸ್ತು ಕ್ರಮ ಕೈಗೊಳ್ಳುವ ಬಗ್ಗೆ.

**ಓದಲಾಗಿದೆ:**
1) ಸರ್ಕಾರಿ ಪತ್ರ ಸಂಖ್ಯೆ: ಡಿಪಿಎಆರ್ 76 ಹೆಚ್‌ಇಟಿ 98, ದಿನಾಂಕ: 20.03.2006 ಮತ್ತು 26.09.2001.
2) ಡೆಪ್ಯೂಟಿ ರಿಜಿಸ್ಟ್ರಾರ್ (ವಿಚಾರಣೆಗಳು-2), ಕರ್ನಾಟಕ ಲೋಕಾಯುಕ್ತ ಬೆಂಗಳೂರು ರವರ ವಿಚಾರಣಾ ವರದಿ ಸಂಖ್ಯೆ: ಎಲ್‌ಓಕೆ:ಡಿಆರ್‌ಇ-2:ಇಎನ್‌ಕ್ಯೂ-10:2001-02, ದಿನಾಂಕ: 27.02.2006.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1) ರಲ್ಲಿನ ದಿನಾಂಕ: 20.03.2000ದ ಆದೇಶದಲ್ಲಿ ಶ್ರೀ ಮರಿದಾಸ್, ವ್ಯವಸ್ಥಾಪಕ ಮತ್ತು ಶ್ರೀ ಎ. ರಂಗಸ್ವಾಮಿ, ದ್ವಿತೀಯ ದರ್ಜೆ ಸಹಾಯಕ, ಇವರುಗಳು ಬಾಲಬ್ರೂಯಿ ಅತಿಥಿ ಗೃಹದಲ್ಲಿ ದುರುಪಯೋಗಪಡಿಸಿಕೊಂಡ ಮೊತ್ತ ರೂ.29,659.00 (ಇಪ್ಪತ್ತೊಂಭತ್ತು ಸಾವಿರದ ಆರು ನೂರ ಐವತ್ತೊಂಭತ್ತು ರೂಪಾಯಿಗಳು ಮಾತ್ರ) ಗಳ ಹಣದ ಬಗ್ಗೆ ಜಂಟಿ ವಿಚಾರಣೆ ಮಾಡಲು ಕರ್ನಾಟಕ ಲೋಕಾಯುಕ್ತದ ಡೆಪ್ಯೂಟಿ ರಿಜಿಸ್ಟ್ರಾರ್ (ವಿಚಾರಣೆಗಳು-1) ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಗಿತ್ತು. ಸದರಿಯವರು ವರ್ಗಾವಣೆಯಾದ ಪ್ರಯುಕ್ತ ಕರ್ನಾಟಕ ಲೋಕಾಯುಕ್ತದ ಡೆಪ್ಯೂಟಿ ರಿಜಿಸ್ಟ್ರಾರ್ (ವಿಚಾರಣೆಗಳು-2) ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಗಿತ್ತು.

ಡೆಪ್ಯೂಟಿ ರಿಜಿಸ್ಟ್ರಾರ್ (ವಿಚಾರಣೆಗಳು-2), ಕರ್ನಾಟಕ ಲೋಕಾಯುಕ್ತ ಬೆಂಗಳೂರು ರವರು ಮೇಲೆ ಓದಲಾದ ಕ್ರಮ ಸಂಖ್ಯೆ (2) ರಲ್ಲಿನ ದಿನಾಂಕ: 27.02.2006ರ ವಿಚಾರಣಾ ವರದಿಯಲ್ಲಿ ಪ್ರಕರಣದ ಬಗ್ಗೆ ವಿಚಾರಣೆ ನಡೆಸಿ, ಸರ್ಕಾರಕ್ಕೆ ವಿಚಾರಣಾ ವರದಿಯನ್ನು ಸಲ್ಲಿಸಿರುತ್ತಾರೆ. ವಿಚಾರಣಾಧಿಕಾರಿಗಳು ತಮ್ಮ ವರದಿಯಲ್ಲಿ, ದುರುಪಯೋಗವಾಗಿದ್ದ ರಾಜಸ್ವ ಮೊತ್ತವು ಅಂದಿನ ರಾಜ್ಯ ಅತಿಥೇಯ ಸಂಸ್ಥೆಯಾದ ಕುಮಾರ ಕೃಪ ಅತಿಥಿ ಗೃಹದ ವಿಶೇಷಾಧಿಕಾರಿಯವರು ಒಂದನೇ ಆರೋಪಿತ ನೌಕರರಿಂದ ಕಟಾಯಿಸಲು ಅಧಿಕೃತ ಜ್ಞಾಪನ ದಿನಾಂಕ: 12.11.1998ನ್ನು ಹೊರಡಿಸಿದ್ದು, ಸದರಿ ನಿರ್ದೇಶನದಂತೆ ದುರುಪಯೋಗದ ಮೊತ್ತವನ್ನು ಒಂದನೇ ಆರೋಪಿತ ನೌಕರರ ವೇತನದಿಂದ ವಸೂಲಾತಿ ಮಾಡಿರುವುದಾಗಿ ರಾಜ್ಯ ಅತಿಥೇಯ ಸಂಸ್ಥೆಯಾದ ಕುಮಾರ ಕೃಪ ಅತಿಥಿ ಗೃಹದ ಅಧೀಕ್ಷಕರು ದಿನಾಂಕ: 09.04.2001 ರಂದು ದೃಢೀಕರಣ ಪತ್ರ ನೀಡಿರುತ್ತಾರೆ ಎಂಬ ಅಂಶವನ್ನು ವಿಚಾರಣಾ ವರದಿಯಲ್ಲಿ ಸ್ಪಷ್ಟಪಡಿಸಿರುತ್ತಾರೆ. ಮುಂದುವರೆದು, ಸದರಿ ವಿಚಾರಣಾ ವರದಿಯಲ್ಲಿ ಒಂದನೇ ಆಪಾದಿತರಾದ ಶ್ರೀ ಮರಿದಾಸ್ ಟಿ. ರವರು ದಿನಾಂಕ: 11.06.2000 ದಂದು ನಿಧನ ಹೊಂದಿರುವುದರ ಕಾರಣ, ಸದರಿಯವರ ವಿರುದ್ಧ ಇಲಾಖಾ ವಿಚಾರಣೆಯನ್ನು ಕೈಬಿಡಲಾಗಿದೆ ಹಾಗೂ ಎರಡನೇ ಆಪಾದಿತ ನೌಕರರಾದ ಶ್ರೀ ಎ. ರಂಗಸ್ವಾಮಿ, ದ್ವಿತೀಯ ದರ್ಜೆ ಸಹಾಯಕ, ಇವರ ವಿರುದ್ಧ ಮಾಡಲಾದ ಆರೋಪಗಳು ವಿಚಾರಣಾ ಅವಧಿಯಲ್ಲಿ ಸಾಬೀತಾಗಿಲ್ಲವೆಂದು ವರದಿ ಮಾಡಿರುತ್ತಾರೆ.

ವಿಚಾರಣಾಧಿಕಾರಿಯವರು ಸರ್ಕಾರಕ್ಕೆ ಸಲ್ಲಿಸಿರುವ ವರದಿಯನ್ನು ಕೂಲಂಕಷವಾಗಿ ಪರಿಶೀಲಿಸಿದ ನಂತರ ಸರ್ಕಾರವು ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಡಿಪಿಎಆರ್ 76 ಹೆಚ್‌ಇಟಿ 98, ಬೆಂಗಳೂರು, ದಿನಾಂಕ: 11ನೇ ಮೇ 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಬೆಂಗಳೂರಿನ ಬಾಲಬ್ರೂಯಿ ಅತಿಥಿ ಗೃಹದಲ್ಲಿ ಆಗಿರುವ ಅವ್ಯವಹಾರಗಳಿಗೆ ಸಂಬಂಧಿಸಿದಂತೆ ಒಂದನೇ ಆರೋಪಿಯಾದ ಶ್ರೀ ಟಿ. ಮರಿದಾಸ್ ರವರು ನಿಧನ ಹೊಂದಿರುವುದರ ಪ್ರಯುಕ್ತ ಸದರಿಯವರ ವಿರುದ್ಧ ನಡೆಸಬೇಕಾಗಿದ್ದ ವಿಚಾರಣೆಯನ್ನು ಕೈಬಿಡಲಾಗಿದೆಯೆಂದು ವಿಚಾರಣಾಧಿಕಾರಿಯವರು ಅಭಿಪ್ರಾಯಪಟ್ಟಿರುವುದನ್ನು ಸರ್ಕಾರವು ಸ್ಥಿರೀಕರಿಸಿದೆ. ಹಾಗೂ, ಎರಡನೇ ಆಪಾದಿತ ನೌಕರರಾದ ಶ್ರೀ ಎ. ರಂಗಸ್ವಾಮಿ, ದ್ವಿತೀಯ ದರ್ಜೆ ಸಹಾಯಕ, ಇವರ ವಿರುದ್ಧ ಮಾಡಲಾದ ಆರೋಪಗಳು ಸಾಬೀತಾಗಿರುವುದಿಲ್ಲ ವಾದ್ದರಿಂದ ಸರ್ಕಾರವು ಸದರಿಯವರನ್ನು ಈ ಆರೋಪದಿಂದ ಮುಕ್ತಗೊಳಿಸಿ ಆದೇಶ ಹೊರಡಿಸಿದೆ.

2. ದುರುಪಯೋಗವಾದ ಸರ್ಕಾರದ ರಾಜಸ್ವವು ವಿಚಾರಣಾ ಅವಧಿಯಲ್ಲಿ ಆರೋಪಿತ ನೌಕರರ ವೇತನದಿಂದ ವಸೂಲಾತಿಯಾಗಿರುವುದರಿಂದ, ದುರುಪಯೋಗದ ಮೊತ್ತವು ಸರ್ಕಾರಕ್ಕೆ ಜಮೆಯಾಗಿದೆಯೆಂದು ಭಾವಿಸಲಾಗಿದೆ. ಈ ವಿವರವನ್ನು ಬಾಲಬ್ರೂಯಿ ಅತಿಥಿ ಗೃಹದ ಸಂಬಂಧಿಸಿದ ಆರ್ಥಿಕ ವರ್ಷದ ಲೆಕ್ಕ ಪುಸ್ತಕದಲ್ಲಿ ಸೂಕ್ತವಾಗಿ ಅಳವಡಿಸಿಕೊಳ್ಳಲು ಸೂಚಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎನ್.ಆರ್. ಸುಧಾಕರ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ರಾಜ್ಯ ಶಿಷ್ಟಾಚಾರ).

ಪಿ.ಆರ್. 750

## ಸಹಕಾರ ಸಚಿವಾಲಯ

**ವಿಷಯ:** ಶ್ರೀ ಭೀಮಾಶಂಕರ ಸಹಕಾರಿ ಸಕ್ಕರೆ ಕಾರ್ಖಾನೆ (ನಿ) ಇಂಡಿ, ಸಿಂದಗಿ ತಾಲ್ಲೂಕು ಇದರ 2004-05 ಮತ್ತು 2005-06ನೇ ಸಾಲಿನ ವಾರ್ಷಿಕ ಮಹಾಸಭೆಯನ್ನು ಮುಂದೂಡಲು ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 27(1) ರಡಿಯಲ್ಲಿ ಅನುಮತಿ ನೀಡುವ ಬಗ್ಗೆ - ಆದೇಶ.

**ಓದಲಾಗಿದೆ:** 1) ಆಯುಕ್ತರು ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರ ಪತ್ರ ಸಂಖ್ಯೆ: ಡಿಎಸ್‌ಕೆ/ಇಎಸ್‌ಟಿಎಸ್/111/ಜಿಬಿಎಮ್ 2002-2003, ದಿನಾಂಕ: 24.03.2006.

**ಪ್ರಸ್ತಾವನೆ:**

ಮೇಲೆ ಓದಲಾದ ಪತ್ರದಲ್ಲಿ ಆಯುಕ್ತರು ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರು ಶ್ರೀ ಭೀಮಾಶಂಕರ ಸಹಕಾರಿ ಸಕ್ಕರೆ ಕಾರ್ಖಾನೆ (ನಿ) ಇಂಡಿ, ಸಿಂದಗಿ ತಾಲ್ಲೂಕು, ಬಿಜಾಪುರ ಜಿಲ್ಲೆ ಇದರ 2004-05ನೇ ಸಾಲಿನ ವಾರ್ಷಿಕ ಮಹಾಸಭೆಯನ್ನು ಸಕ್ಕರೆ ನಿರ್ದೇಶಕರು ತಮ್ಮ ಅಧಿಕಾರ ವ್ಯಾಪ್ತಿಯಲ್ಲಿ ದಿನಾಂಕ: 31.3.2006ರ ವರೆಗೆ ವಿಸ್ತರಿಸಿರುತ್ತಾರೆ. ಪ್ರಸ್ತುತ ವಾರ್ಷಿಕ ಮಹಾಸಭೆಯನ್ನು ನಡೆಸಲು ಸುಮಾರು ರೂ.2.50 ಲಕ್ಷ ಖರ್ಚು ತಗಲುವ ಸಂಭವ ಇರುವುದರಿಂದ ಹಾಗೂ 2005-06ನೇ ಸಾಲು ಅಂತ್ಯಗೊಳ್ಳಲಿದ್ದು, 2 ಸಾಲುಗಳ ವಾರ್ಷಿಕ ಮಹಾಸಭೆಗಳನ್ನು ನಡೆಸಲು ದಿನಾಂಕ: 30.9.2006 ರವರೆಗೆ ಕಾಲಾವಕಾಶ ವಿಸ್ತರಿಸುವ ಬಗ್ಗೆ ಕಾರ್ಖಾನೆಯ ಆಡಳಿತ ಮಂಡಳಿಯ ತೀರ್ಮಾನದಂತೆ ವ್ಯವಸ್ಥಾಪಕ ನಿರ್ದೇಶಕರು ವರದಿ ಮಾಡಿದ ಹಿನ್ನೆಲೆಯಲ್ಲಿ ಸಕ್ಕರೆ ನಿರ್ದೇಶಕರು ಶಿಫಾರಸ್ಸು ಮಾಡುತ್ತಾ ಎರಡೂ ಸಾಲುಗಳ ವಾರ್ಷಿಕ ಮಹಾಸಭೆಯನ್ನು ದಿನಾಂಕ: 30.9.2006 ರಂದು ನಡೆಸಲು ಅವಧಿ ವಿಸ್ತರಿಸುವ ಬಗ್ಗೆ ಆದೇಶವನ್ನು ಕೋರಿರುತ್ತಾರೆ.

ಸದರಿ ಪ್ರಸ್ತಾವವನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಇ 98 ಸಸಕಾ 2006, ಬೆಂಗಳೂರು, ದಿನಾಂಕ: 4ನೇ ಮೇ 2006**

ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 121 ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕರ್ನಾಟಕ ಸರ್ಕಾರವು ಶ್ರೀ ಭೀಮಾಶಂಕರ ಸಹಕಾರಿ ಸಕ್ಕರೆ ಕಾರ್ಖಾನೆ (ನಿ) ಇಂಡಿ, ಸಿಂದಗಿ ತಾಲ್ಲೂಕು, ಬಿಜಾಪುರ ಜಿಲ್ಲೆ ಇದರ 2004-05 ಮತ್ತು 2005-06ನೇ

ಸಾಲಿನ ವಾರ್ಷಿಕ ಮಹಾಸಭೆಯನ್ನು ದಿನಾಂಕ: 30.9.2006 ರೊಳಗೆ ನಡೆಸಲು ಕಾಲಾವಕಾಶ ನೀಡಲು ಅನುವಾಗುವಂತೆ ಸದರಿ ಕಾರ್ಖಾನೆಗೆ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 27(1) ಉಪಬಂಧಗಳು ಈ ಕೆಳಗಿನ ಮಾರ್ಪಾಡುಗಳೊಂದಿಗೆ ಅನ್ವಯವಾಗುತ್ತದೆ ಎಂದು ನಿರ್ದೇಶಿಸುತ್ತದೆ. ಎಂದರೆ

**27ರ ಪ್ರಕರಣದಲ್ಲಿ**

27ನೇ ಪ್ರಕರಣದ ಉಪ ಪ್ರಕರಣ (1)ರ ಪರಂತುಕದಲ್ಲಿನ "ಆರು ತಿಂಗಳು" ಎಂಬ ಪದಗಳಿಗೆ ಬದಲಾಗಿ "ಹನ್ನೆರಡು ತಿಂಗಳು" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

**ಸೂಚನೆ:**

ಪ್ರಕರಣ 27(1)ಕ್ಕೆ ಮಾಡಿದ ಮಾರ್ಪಾಡು ದಿನಾಂಕ: 30.9.2006ರ ವರೆಗೆ ಜಾರಿಯಲ್ಲಿರತಕ್ಕದ್ದು, ಈ ಅವಧಿ ಮುಗಿದ ನಂತರ ಈ ಆದೇಶದ ಮಾರ್ಪಾಡಿಗೆ ಮೊದಲು ಜಾರಿಯಲ್ಲಿದ್ದಂತೆ ಸದರಿ 27 (1)ಕ್ಕೆ ಪ್ರಕರಣದ ಉಪಬಂಧಗಳು ಪುನಃ ಜಾರಿಗೆ ಬರತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಾಣದ ರಂಗಪ್ಪ**

ಪಿ.ಆರ್. 754 ಸರ್ಕಾರದ ಅಧೀನ ಕಾರ್ಯದರ್ಶಿ, ಸಹಕಾರ ಇಲಾಖೆ.

**ವಿಷಯ:** ಬೆಳ್ತಂಗಡಿ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗೆ ಮಂಜೂರಾದ ಹುದ್ದೆಗಳನ್ನು ಮುಂದುವರೆಸುವ ಬಗ್ಗೆ.

**ಓದಲಾಗಿದೆ:**
1) ಸರ್ಕಾರದ ಆದೇಶ ಸಂಖ್ಯೆ: ಸಮಾತೂ/231/ಎಂಆರ್‌ಇ/97, ದಿನಾಂಕ: 16.04.1999.
2) ಸರ್ಕಾರದ ಆದೇಶ ಸಂಖ್ಯೆ: ಸಇ 98 ಮಾಇಸೇ 2003, ದಿನಾಂಕ: 23.06.2003.
3) ಆಯುಕ್ತರು, ಕೃಷಿ ಮಾರಾಟ ಇಲಾಖೆ, ಬೆಂಗಳೂರು ರವರ ಪತ್ರ ಸಂಖ್ಯೆ: ಕೃಮಾಇ 44 ಸಿಬ್ಬಂದಿ-1(ಸಿ) 05, ದಿನಾಂಕ: 10.02.2005.

**ಪ್ರಸ್ತಾವನೆ:**

ಕೃಷಿ ಮಾರಾಟ ಇಲಾಖೆಯ ಆಯುಕ್ತರು ದಿನಾಂಕ: 10.2.2005ರ ಪ್ರಸ್ತಾವನೆಯಲ್ಲಿ ಮೇಲೆ ಓದಲಾದ ಕ್ರಮಾಂಕ (1) ರಲ್ಲಿನ ಆದೇಶಾನುಸಾರ ಬೆಳ್ತಂಗಡಿ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗೆ 2 ವರ್ಷಗಳ ಅವಧಿಗೆ 10 ಹುದ್ದೆಗಳನ್ನು ಸೃಷ್ಟಿಸಿ ಸರ್ಕಾರದ ಮಂಜೂರಾತಿ ನೀಡಲಾಗಿತ್ತು. ತದನಂತರ, ಸದರಿ ಹುದ್ದೆಗಳನ್ನು ವಿವಿಧ ಆದೇಶಗಳ ಮೂಲಕ ಕಾಲಕಾಲಕ್ಕೆ ತಾತ್ಕಾಲಿಕವಾಗಿ ಮುಂದುವರೆಸಲಾಗಿತ್ತು. ಮೇಲೆ ಓದಲಾದ (2) ರಲ್ಲಿನ ದಿನಾಂಕ: 23.06.2003ರ ಆದೇಶದಲ್ಲಿ ಸದರಿ ಹುದ್ದೆಗಳ ಅವಧಿಯನ್ನು ದಿನಾಂಕ: 14.04.2005ರ ವರೆಗೆ ವಿಸ್ತರಿಸಿ ಮಂಜೂರಾತಿ ನೀಡಲಾಗಿತ್ತು. ಸದರಿ ಹುದ್ದೆಗಳನ್ನು ದಿನಾಂಕ: 15.04.2005 ರಿಂದ ಖಾಯಂಗೊಳಿಸಲು ಅಥವಾ ಖಾಯಂಗೊಳಿಸುವ ಪ್ರಕ್ರಿಯೆ ವಿಳಂಬವಾದಲ್ಲಿ ಪುನಃ 2 ವರ್ಷಗಳ ಅವಧಿಗೆ ಮುಂದುವರೆಸಲು ಕೃಷಿ ಮಾರಾಟ ಇಲಾಖೆಯ ಆಯುಕ್ತರು ಪ್ರಸ್ತಾಪಿಸಿರುತ್ತಾರೆ. ಈ ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸಿದೆ. ಆದ್ದರಿಂದ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಸಇ 269 ಮಾಇಸೇ 2005, ಬೆಂಗಳೂರು, ದಿನಾಂಕ: 28ನೇ ಏಪ್ರಿಲ್ 2006**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳಿಂದಾಗಿ, ಬೆಳ್ತಂಗಡಿ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗೆ ಮಂಜೂರಾದ ಈ ಕೆಳಕಂಡ ಹುದ್ದೆಗಳನ್ನು ತಾತ್ಕಾಲಿಕವಾಗಿ ದಿನಾಂಕ: 15.04.2005 ರಿಂದ 14.04.2006 ರವರೆವಿಗೆ ಮುಂದುವರಿಸಲು ಸರ್ಕಾರದ ಮಂಜೂರಾತಿ ನೀಡಲಾಗಿದೆ.

| ಕ್ರ.ಸಂ. | ಹುದ್ದೆಗಳ ಪದನಾಮ | ಪರಿಷ್ಕೃತ ವೇತನ ಶ್ರೇಣಿ | ಹುದ್ದೆಗಳ ಸಂಖ್ಯೆ |
|---|---|---|---|
| 1 | ಕಾರ್ಯದರ್ಶಿ | 5575-10620 | 01 |
| 2 | ಲೆಕ್ಕಿಗರು ದರ್ಜೆ-2 | 3850-7050 | 01 |
| 3 | ಪ್ರಥಮ ದರ್ಜೆ ಸಹಾಯಕರು | 3850-5450 | 01 |
| 4 | ಬೆರಳಚ್ಚುಗಾರರು | 3000-5450 | 01 |
| 5 | ಮಾರುಕಟ್ಟೆ ಸಹಾಯಕರು | 3000-5450 | 03 |
| 6 | ಗ್ರೂಪ್ ಡಿ | 2500-3850 | 02 |
| 7 | ವಾಹನ ಚಾಲಕ | 3000-5450 | 01 |
| | **ಒಟ್ಟು** | | **10** |

ಈ ಬಗ್ಗೆ ತಗಲುವ ವೆಚ್ಚವನ್ನು ಲೆಕ್ಕ ಶೀರ್ಷಿಕೆ ಸಂಖ್ಯೆ: "3475-ಇತರೆ ಸಾಮಾನ್ಯ ಆರ್ಥಿಕ ಸೇವೆಗಳು-107-ಮಾರುಕಟ್ಟೆ ಕ್ರಮ ಪಡಿಸುವಿಕೆ-02- ಮಾರುಕಟ್ಟೆ ಸಮಿತಿಗಳು (ಯೋಜನೇತರ)" ರ ಅಡಿಯಲ್ಲಿ ಭರಿಸುವುದು.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರ ಅನಧಿಕೃತ ಟಿಪ್ಪಣಿ ಸಂಖ್ಯೆ: ಸಇ 122 ಆಂಆಸ (ಎ) 06 ದಿನಾಂಕ: 29.03.2006 ಮತ್ತು ಸರ್ಕಾರದ ಆದೇಶ ಸಂಖ್ಯೆ: ಆಇ:01/ಟಿಎಫ್‌ಟಿ/96, ದಿನಾಂಕ: 10.07.1996 ರಲ್ಲಿ ಇಲಾಖಾ ಕಾರ್ಯದರ್ಶಿಗಳಿಗೆ ಆರ್ಥಿಕ ಇಲಾಖೆಗೆ ನೀಡಲಾಗಿರುವ ಆರ್ಥಿಕ ಪ್ರತ್ಯಾಧಿಕಾರದ ಮೇರೆಗೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ.ಎಸ್. ಜಾಪಾಲಿ**

ಪಿ.ಆರ್. 755 ಸರ್ಕಾರದ ಅಧೀನ ಕಾರ್ಯದರ್ಶಿ, ಸಹಕಾರ ಇಲಾಖೆ.

**ವಿಷಯ:** ಪಿರಿಯಾಪಟ್ಟಣ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗೆ ಮಂಜೂರಾದ ಹುದ್ದೆಗಳನ್ನು ಮುಂದುವರೆಸುವ ಬಗ್ಗೆ.

**ಓದಲಾಗಿದೆ:**
1) ಸರ್ಕಾರದ ಆದೇಶ ಸಂಖ್ಯೆ: ಸಿಎಂಡಬ್ಲ್ಯು/22/ಎಂಡಿಎಸ್/92, ದಿನಾಂಕ: 03.01.1994.
2) ಸರ್ಕಾರದ ಆದೇಶ ಸಂಖ್ಯೆ: ಸಇ/5/ಮಾಇಸೇ 2005, ದಿನಾಂಕ: 05.07.2005.
3) ಆಯುಕ್ತರು, ಕೃಷಿ ಮಾರಾಟ ಇಲಾಖೆ, ಬೆಂಗಳೂರುರವರ ಪತ್ರ ಸಂಖ್ಯೆ: ಮಾಇ/123/ಸಿಬ್ಬಂದಿ-1(ಸಿ) 05, ದಿನಾಂಕ: 26.04.2005.

**ಪ್ರಸ್ತಾವನೆ:**

ಕೃಷಿ ಮಾರಾಟ ಇಲಾಖೆಯ ಆಯುಕ್ತರು ದಿನಾಂಕ: 26.04.2005ರ ಪ್ರಸ್ತಾವನೆಯಲ್ಲಿ ಮೇಲೆ ಓದಲಾದ ಕ್ರಮಾಂಕ (1) ರಲ್ಲಿನ ಆದೇಶಾನುಸಾರ ಪಿರಿಯಾಪಟ್ಟಣ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗೆ ಒಟ್ಟು 11 ಹುದ್ದೆಗಳನ್ನು ಸೃಷ್ಟಿಸಿ ಸರ್ಕಾರದ ಮಂಜೂರಾತಿ ನೀಡಲಾಗಿತ್ತು. ತದನಂತರ, ಸದರಿ ಹುದ್ದೆಗಳನ್ನು ವಿವಿಧ ಆದೇಶಗಳ ಮೂಲಕ ಕಾಲಕಾಲಕ್ಕೆ ತಾತ್ಕಾಲಿಕವಾಗಿ ಮುಂದುವರೆಸಲಾಗಿತ್ತು. ಮೇಲೆ ಓದಲಾದ (2) ರಲ್ಲಿನ ದಿನಾಂಕ: 05.07.2005ರ ಆದೇಶದಲ್ಲಿ ಸದರಿ ಹುದ್ದೆಗಳ ಅವಧಿಯನ್ನು ದಿನಾಂಕ: 31.01.2006 ರವರೆಗೆ ವಿಸ್ತರಿಸಿ ಮಂಜೂರಾತಿ ನೀಡಲಾಗಿತ್ತು. ಸದರಿ ಹುದ್ದೆಗಳನ್ನು ದಿನಾಂಕ: 01.02.2006 ರಿಂದ ಖಾಯಂಗೊಳಿಸಲು ಅಥವಾ ಖಾಯಂಗೊಳಿಸುವ ಪ್ರಕ್ರಿಯೆ ವಿಳಂಬವಾದಲ್ಲಿ ಪುನಃ 2 ವರ್ಷಗಳ ಅವಧಿಗೆ ಮುಂದುವರೆಸಲು ಕೃಷಿ ಮಾರಾಟ ಇಲಾಖೆಯ ಆಯುಕ್ತರು ಪ್ರಸ್ತಾಪಿಸಿರುತ್ತಾರೆ. ಈ ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸಿದೆ. ಆದ್ದರಿಂದ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಸಇ 271 ಮಾಇಸೇ 2005, ಬೆಂಗಳೂರು, ದಿನಾಂಕ: 25ನೇ ಏಪ್ರಿಲ್ 2006**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳಿಂದಾಗಿ, ಪಿರಿಯಾಪಟ್ಟಣ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗೆ ಮಂಜೂರಾದ ಈ ಕೆಳಕಂಡ ಹುದ್ದೆಗಳನ್ನು ತಾತ್ಕಾಲಿಕವಾಗಿ ದಿನಾಂಕ: 01.02.2006 ರಿಂದ 31.01.2007 ರವರೆವಿಗೆ ಮುಂದುವರಿಸಲು ಸರ್ಕಾರದ ಮಂಜೂರಾತಿ ನೀಡಲಾಗಿದೆ.

| ಕ್ರ.ಸಂ. | ಹುದ್ದೆಗಳ ಪದನಾಮ | ವೇತನ ಶ್ರೇಣಿ | ಹುದ್ದೆಗಳ ಸಂಖ್ಯೆ |
|---|---|---|---|
| 1 | ಕಾರ್ಯದರ್ಶಿ | 1400-2750 | 1 |
| 2 | ಲೆಕ್ಕಿಗರು | 1190-2200 | 1 |
| 3 | ಮಾರುಕಟ್ಟೆ ಮೇಲ್ವಿಚಾರಕರು ದರ್ಜೆ-3 | 960-1760 | 3 |
| 4 | ಮಾರುಕಟ್ಟೆ ಮೇಲ್ವಿಚಾರಕರು ದರ್ಜೆ-4 | 810-1310 | 2 |
| 5 | ಸಿಪಾಯಿ | 780-1040 | 3 |
| 6 | ಚಾಲಕ | 870-1600 | 1 |
| | **ಒಟ್ಟು** | | **11** |

ಈ ಬಗ್ಗೆ ತಗಲುವ ವೆಚ್ಚವನ್ನು ಲೆಕ್ಕ ಶೀರ್ಷಿಕೆ ಸಂಖ್ಯೆ: "3475-ಇತರೆ ಸಾಮಾನ್ಯ ಆರ್ಥಿಕ ಸೇವೆಗಳು-107-ಮಾರುಕಟ್ಟೆ ಕ್ರಮ ಪಡಿಸುವಿಕೆ-02- ಮಾರುಕಟ್ಟೆ ಸಮಿತಿಗಳು (ಯೋಜನೇತರ)" ರ ಅಡಿಯಲ್ಲಿ ಭರಿಸುವುದು.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರ ಅನಧಿಕೃತ ಟಿಪ್ಪಣಿ ಸಂಖ್ಯೆ: ಸಇ 41 ಅಂಆಸ (ಎ) 05 ದಿನಾಂಕ: 29.03.2006 ಮತ್ತು ಸರ್ಕಾರದ ಆದೇಶ ಸಂಖ್ಯೆ: ಆಇ:01/ಟಿಎಫ್‌ಟಿ/96, ದಿನಾಂಕ: 10.07.1996 ರಲ್ಲಿ ಇಲಾಖಾ ಕಾರ್ಯದರ್ಶಿಗಳಿಗೆ ಆರ್ಥಿಕ ಇಲಾಖೆಗೆ ನೀಡಲಾಗಿರುವ ಆರ್ಥಿಕ ಪ್ರತ್ಯಾಧಿಕಾರದ ಮೇರೆಗೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಬಿ.ಎಸ್. ಜಾಪಾಲಿ**
ಪಿ.ಆರ್. 756 ಸರ್ಕಾರದ ಅಧೀನ ಕಾರ್ಯದರ್ಶಿ, ಸಹಕಾರ ಇಲಾಖೆ.

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

**ವಿಷಯ:** ಶ್ರೀ ಸಿ.ಆರ್. ಲಕ್ಷ್ಮಣರಾವ್, ದ್ವಿ.ದ.ಸ. ಪಂಚಾಯತ್ ರಾಜ್ ಇಂಜಿನಿಯರಿಂಗ್ ಉಪ ವಿಭಾಗ, ಕೋಲಾರ ಇವರ ಮೇಲಿನ ಆಪಾದನೆ ಬಗ್ಗೆ - ಇಲಾಖಾ ವಿಚಾರಣೆ ದೋಷಮುಕ್ತರನ್ನಾಗಿಸುವ ಬಗ್ಗೆ ಆದೇಶ.

**ಓದಲಾಗಿದೆ:**
1) ಆದೇಶ ಸಂಖ್ಯೆ: ಗ್ರಾಅಪ 90 ಇಎನ್‌ಕ್ಯೂ 2000, ದಿನಾಂಕ: 4.1.2001.
2) ಶ್ರೀ ಲಕ್ಷ್ಮಣರಾವ್, ಇವರ ಮನವಿ ದಿನಾಂಕ: 9.4.2001.
3) ಪತ್ರ ಸಂಖ್ಯೆ: ಗ್ರಾಅಪ 90 ಇಎನ್‌ಕ್ಯೂ 2000, ದಿನಾಂಕ: 1.6.2001.
4) ಕೆ.ಎ.ಟಿ. ಅರ್ಜಿ ಸಂಖ್ಯೆ: 5855/2001, ದಿನಾಂಕ: 19.6.2001 ರಂದು ನೀಡಿದ ತೀರ್ಪು.
5) ಆದೇಶ ಸಂಖ್ಯೆ: ಗ್ರಾಅಪ 90 ಇಎನ್‌ಕ್ಯೂ 2000, ದಿನಾಂಕ: 6.3.2004.
6) ಕರ್ನಾಟಕ ಉಪ ಲೋಕಾಯುಕ್ತ ಇವರ ಪತ್ರ ಸಂಖ್ಯೆ: LOK/ARE-4/ENQ-13/2001-02, ದಿನಾಂಕ: 12.4.2006.

**ಪ್ರಸ್ತಾವನೆ:**

ಶ್ರೀ ಸಿ.ಆರ್. ಲಕ್ಷ್ಮಣರಾವ್, ದ್ವಿ.ದ.ಸ. ಪಂಚಾಯತ್ ರಾಜ್ ಇಂಜಿನಿಯರಿಂಗ್ ಉಪ ವಿಭಾಗ, ಕೋಲಾರ ಇವರು ಸದರಿ ಇಂಜಿನಿಯರಿಂಗ್ ಉಪ ವಿಭಾಗದಲ್ಲಿ ಕಾರ್ಯನಿರ್ವಹಿಸುತ್ತಿದ್ದಾಗ ಶ್ರೀ ಎನ್. ನಾರಾಯಣಸ್ವಾಮಿ ಎಂಬ ಗುತ್ತಿಗೆದಾರರಿಂದ ರೂ.500-00 ಗಳ ಅಕ್ರಮ ಸಂಭಾವನೆಯನ್ನು ಒತ್ತಾಯ ಪೂರ್ವಕವಾಗಿ ಪಡೆಯುವಾಗ ಲೋಕಾಯುಕ್ತ ಬಲೆಗೆ ಸಿಲುಕಿದ್ದರೆಂಬ ಕಾರಣಕ್ಕಾಗಿ ಅವರ ಮೇಲೆ ಕ.ನಾ.ಸೇ. (ವ.ನಿ.ಮೇ.) 1957ರ ನಿಯಮ-14(ಎ) ರಂತೆ ಇಲಾಖಾ ವಿಚಾರಣೆ ನಡೆಸಲು ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಆದೇಶದಲ್ಲಿ ಪ್ರಕರಣವನ್ನು ಮಾನ್ಯ ಉಪ ಲೋಕಾಯುಕ್ತರಿಗೆ ವಹಿಸಲಾಗಿತ್ತು. ಶ್ರೀ ಲಕ್ಷ್ಮಣರಾವ್, ಇವರು ಇದೇ ವಿಷಯದ ಬಗ್ಗೆ ಮೇಲೆ ಓದಲಾದ ಕ್ರಮ ಸಂಖ್ಯೆ: (2) ರಲ್ಲಿ ಸರ್ಕಾರಕ್ಕೆ ಮನವಿ ಸಲ್ಲಿಸಿ ತಮ್ಮ ಮೇಲಿನ ಲಂಚ ಆಪಾದನೆಗೆ ಸಂಬಂಧಿಸಿದಂತೆ ಲೋಕಾಯುಕ್ತ ಪೊಲೀಸರು ಪ್ರಿನ್ಸಿಪಲ್ ಸೆಷನ್ ಕೋರ್ಟ್‌ನಲ್ಲಿ ಪ್ರಕರಣ ಎವಿಡೆನ್ಸ್ ಹಂತದಲ್ಲಿರುವುದರಿಂದ ಕ್ರಿಮಿನಲ್ ಮೊಕದ್ದಮೆ ಮುಗಿಯುವವರೆವಿಗೆ ಇಲಾಖಾ ವಿಚಾರಣೆ ತಡೆ ಹಿಡಿಯುವಂತೆ ಕೋರಿದ್ದರು. ಅವರ

ಮನವಿಯನ್ನು ಕೂಲಂಕಷವಾಗಿ ಪರಿಶೀಲಿಸಿ, ಆಪಾದನೆಯೊಂದಕ್ಕೆ ಸಂಬಂಧಿಸಿದಂತೆ ಏಕ ಕಾಲದಲ್ಲಿ ನ್ಯಾಯಾಂಗ ನಡವಳಿಗಳು (ಕ್ರಿಮಿನಲ್ ಕೇಸ್) ಮತ್ತು ಇಲಾಖಾ ವಿಚಾರಣೆಯನ್ನು ನಡೆಸಲು ನಿರ್ಬಂಧವಿಲ್ಲವಾದ್ದರಿಂದ ಇವರ ಮೇಲಿನ ಕ್ರಿಮಿನಲ್ ಮೊಕದ್ದಮೆಯ ತೀರ್ಪನ್ನು ಕಾಯ್ದಿರಿಸಿ ಇಲಾಖಾ ವಿಚಾರಣೆಯನ್ನು ತಡೆಹಿಡಿಯಲು ನಿಯಮಗಳಲ್ಲಿ ಅವಕಾಶವಿಲ್ಲವೆಂದು ಅವರಿಗೆ ಮೇಲೆ ಓದಲಾದ ಕ್ರಮ ಸಂಖ್ಯೆ: (3)ರ ಪತ್ರದಲ್ಲಿ ಹಿಂಬರಹ ನೀಡಲಾಗಿತ್ತು.

ಸರ್ಕಾರದ ಹಿಂಬರಹವನ್ನು ಅವರು ಕರ್ನಾಟಕ ಆಡಳಿತ ನ್ಯಾಯ ಮಂಡಳಿಯಲ್ಲಿ ಪ್ರಶ್ನಿಸಿ, ಅರ್ಜಿ ಸಂಖ್ಯೆ: 5855/01ನ್ನು ದಾಖಲಿಸಿದ್ದರು. ಸದರಿ ನ್ಯಾಯ ಮಂಡಳಿಯು ಮೇಲೆ ಓದಲಾದ ಕ್ರಮ ಸಂಖ್ಯೆ: (4)ರ ದಿನಾಂಕ: 19.6.2001 ರಂದು ತೀರ್ಪು ನೀಡಿ, ಆಪಾದಿತ ನೌಕರನಿಗೆ ಮೌಖಿಕ ವಿಚಾರಣೆ ನಡೆಸಲು ಅವಕಾಶ ನೀಡಿ, ನಂತರ ಕ್ರಿಮಿನಲ್ ಮೊಕದ್ದಮೆ ಮುಕ್ತಾಯಗೊಂಡ ನಂತರವು ಅದೇ ವಿಷಯದ ಬಗ್ಗೆ ಬಾಕಿ ಇರುವ ಇಲಾಖಾ ವಿಚಾರಣೆಯನ್ನು ಮುಂದುವರೆಸಲು ಅವಕಾಶ ನೀಡಿದ್ದರಿಂದ, ಅದರಂತೆ ಆಪಾದಿತ ನೌಕರನಿಗೆ ಮೌಖಿಕ ವಿಚಾರಣೆ ಮಾಡಿ, ಬಾಕಿ ಇರುವ ಇಲಾಖಾ ವಿಚಾರಣೆಯನ್ನು ಮುಂದುವರೆಸಲು ಇವರ ಮೇಲೆ ಹೂಡಲಾಗಿರುವ ಇಲಾಖಾ ವಿಚಾರಣೆಯನ್ನು ಮಾನ್ಯ ಉಪ ಲೋಕಾಯುಕ್ತರು ಮುಂದುವರಿಸಿ, ವಿಚಾರಣಾ ವರದಿ ಸಲ್ಲಿಸಬೇಕೆಂದು ಮೇಲೆ ಓದಲಾದ ಕ್ರಮ ಸಂಖ್ಯೆ (5) ರಲ್ಲಿ ಆದೇಶ ಹೊರಡಿಸಲಾಗಿತ್ತು.

ಕರ್ನಾಟಕ ಉಪ ಲೋಕಾಯುಕ್ತ ಇವರು ಮೇಲೆ ಓದಲಾದ ಕ್ರಮ ಸಂಖ್ಯೆ: (6)ರ ದಿನಾಂಕ: 12.4.2006ರ ಪತ್ರದಲ್ಲಿ ಪ್ರಕರಣದಲ್ಲಿ ನಿಯಮಾನುಸಾರ ವಿವರವಾದ ಇಲಾಖಾ ವಿಚಾರಣೆ ನಡೆಸಿ, ಶ್ರೀ ಸಿ.ಆರ್. ಲಕ್ಷ್ಮಣರಾವ್, ದ್ವಿ.ದ.ಸ. ಪಂಚಾಯತ್ ರಾಜ್ ಇಂಜಿನಿಯರಿಂಗ್ ಉಪ ವಿಭಾಗ, ಕೋಲಾರ ಇವರ ಮೇಲಿನ ಆರೋಪವು ರುಜುವಾತಾಗಿರುವುದಿಲ್ಲವೆಂದು ವಿಚಾರಣಾ ವರದಿ ಸಲ್ಲಿಸಿದ್ದರು. ಸದರಿ ವಿಚಾರಣಾ ವರದಿಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ, ಅದನ್ನು ಒಪ್ಪಲು ನಿರ್ಧರಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಗ್ರಾಅಪ 90 ಇಎನ್‌ಕ್ಯೂ 2000, ಬೆಂಗಳೂರು, ದಿನಾಂಕ: 3ನೇ ಮೇ 2006**

ಮೇಲಿನ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಶ್ರೀ ಸಿ.ಆರ್. ಲಕ್ಷ್ಮಣರಾವ್, ದ್ವಿ.ದ.ಸ. ಪಂಚಾಯತ್ ರಾಜ್ ಇಂಜಿನಿಯರಿಂಗ್ ಉಪ ವಿಭಾಗ, ಕೋಲಾರ ಇವರ ಮೇಲಿನ ಆಪಾದನೆಯು ವಿವರವಾದ ವಿಚಾರಣೆಯಲ್ಲಿ ರುಜುವಾತಾಗದೇ ಇರುವುದರಿಂದ ಸರ್ಕಾರವು ಅವರ ಮೇಲಿನ ಆಪಾದನೆಯನ್ನು ಕೈಬಿಟ್ಟು ಅವರನ್ನು ದೋಷಮುಕ್ತಗೊಳಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಸ್.ಸಿ. ಸುಂದರ**
ಸರ್ಕಾರದ ಅಧೀನ ಕಾರ್ಯದರ್ಶಿ (ಸೇವೆಗಳು-ಎ),
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ.

ಪಿ.ಆರ್. 757

## ENERGY SECRETARIAT

**CORRIGENDUM No. EN 178 NCE 2006, Bangalore, Dated: 11th May 2006**

In Government Order No: EN 178 NCE 2006 dated: 21.4.2006 wherever 18 MW (exportable) appears

**Shall be substituted and read as**

"18 MW (exportable during season) and 24 MW (exportable during off season".

By Order and in the name of the Governor of Karnataka,
**SURESH B. KRISHNAPPANAVAR**
Under Secretary to Government, Energy Department.

P.R. 758

## ಕನ್ನಡ ಮತ್ತು ಸಂಸ್ಕೃತಿ ಸಚಿವಾಲಯ

**ವಿಷಯ:** ಸುವರ್ಣ ಕರ್ನಾಟಕ ಕಾರ್ಯಕ್ರಮ ಮತ್ತು ವಿಶ್ವ ಕನ್ನಡ ಸಮ್ಮೇಳನಕ್ಕೆ ಸೃಜಿಸಲಾದ ವಿಶೇಷ ಘಟಕದ ರಚನೆ ಜಂಟಿ ನಿರ್ದೇಶಕರ ವೇತನ ಶ್ರೇಣಿಯನ್ನು ಮಾರ್ಪಡಿಸುವ ಬಗ್ಗೆ.

**ಓದಲಾಗಿದೆ:** ಸರ್ಕಾರಿ ಆದೇಶ ಸಂಖ್ಯೆ: ಸಂಕಇ 27 ಕರಅ 2005, ದಿನಾಂಕ: 26.9.2005.

**ಪ್ರಸ್ತಾವನೆ:**

ಕರ್ನಾಟಕವು ಏಕೀಕರಣಗೊಂಡು 1ನೇ ನವೆಂಬರ್ 2006ಕ್ಕೆ 50 ವರ್ಷಗಳು ತುಂಬುತ್ತಿದ್ದು, ಈ 50 ವರ್ಷಗಳಲ್ಲಿ ಮಾಡಿರುವ ಸಾಧನೆಗಳನ್ನು ನಾಡಿನ ಜನತೆಗೆ ತಿಳಿಸಿ ಕೊಡಲು ಹಾಗೂ ಮುಂದಿನ ಅಭಿವೃದ್ಧಿಗಳ ಬಗ್ಗೆ ಅವರ ಗಮನ ಸೆಳೆಯಲು ಈ ಸಂದರ್ಭದ ಅವಕಾಶವನ್ನು ಉಪಯೋಗಿಸಿಕೊಂಡು ಕರ್ನಾಟಕ ಏಕೀಕರಣದ ಸುವರ್ಣ ಮಹೋತ್ಸವವನ್ನು ಸುವರ್ಣ ಕರ್ನಾಟಕ ಎಂಬ ಹೆಸರಿನಲ್ಲಿ ಅರ್ಥಪೂರ್ಣವಾಗಿ ಆಚರಿಸಲು ಸರ್ಕಾರವು ತೀರ್ಮಾನಿಸಿದೆ. ಸುವರ್ಣ ಕರ್ನಾಟಕ ಆಚರಣೆಯ ಅಂಗವಾಗಿ ಹಮ್ಮಿಕ್ಕೊಂಡ ಪ್ರಮುಖ ಕಾರ್ಯಕ್ರಮಗಳಲ್ಲಿ ವಿಶ್ವಕನ್ನಡ ಸಮ್ಮೇಳನವು ಒಂದು ಅವಿಸ್ಮರಣೀಯ ಕಾರ್ಯಕ್ರಮವಾಗಿರುತ್ತದೆ. ಈ ಸಂಬಂಧದಲ್ಲಿ ಮೇಲೆ ಓದಲಾದ ಸರ್ಕಾರಿ ಆದೇಶದ ವಿಶೇಷ ಸಿಬ್ಬಂದಿ ಘಟಕವನ್ನು ಒಂದು ವರ್ಷದ ಅವಧಿಗೆ ರಚಿಸಲು ಮಂಜೂರಾತಿ ನೀಡಲಾಗಿದೆ.

2006-07ನೇ ಸಾಲಿನ ಆಯವ್ಯಯದಲ್ಲಿ ಸುವರ್ಣ ಕರ್ನಾಟಕ ಆಚರಣೆಗೆ ಕಾರ್ಯಕ್ರಮಗಳನ್ನು ಹಮ್ಮಿಕ್ಕೊಂಡು ಅನುಷ್ಠಾನಗೊಳಿಸಲು ಹಾಗೂ ಈ ಸುವರ್ಣ ಕರ್ನಾಟಕ ವರ್ಷವನ್ನು ಮತ್ತು ಅದರ ಅಂಗವಾಗಿ ನಡೆಸುವ ವಿಶ್ವಕನ್ನಡ ಸಮ್ಮೇಳನವನ್ನು ಅದ್ದೂರಿಯಾಗಿ ವೈಭವಯುತವಾಗಿ ಒಂದು ವರ್ಷ ಕಾಲ ಆಚರಿಸಬೇಕಾಗಿರುವ ಹಿನ್ನೆಲೆಯಲ್ಲಿ ಒಬ್ಬ ಜವಾಬ್ದಾರಿಯುತ ಹಿರಿಯ ವೇತನ ಶ್ರೇಣಿಯ, ಕ್ಷೇತ್ರ ಮಟ್ಟದಲ್ಲಿ ಅನುಭವವುಳ್ಳ ದಕ್ಷ ಅಧಿಕಾರಿಯನ್ನು ಈ ಘಟಕಕ್ಕೆ ನೇಮಿಸುವ ಅವಶ್ಯಕತೆ ಕಂಡುಬರುತ್ತದೆ. ಆದುದರಿಂದ ಈ ವಿಶೇಷ ಘಟಕದ ಮುಖ್ಯಸ್ಥರ ಹುದ್ದೆಯ (ಜಂಟಿ ನಿರ್ದೇಶಕರು) ಈಗಿನ ವೇತನ ಶ್ರೇಣಿ ರೂ.9580-14200 ಬದಲಾಗಿ ಈ ಹುದ್ದೆಯನ್ನು ವೇತನ ಶ್ರೇಣಿ ರಹಿತ ಹುದ್ದೆಯನ್ನಾಗಿ ಪರಿವರ್ತಿಸಲು ಸರ್ಕಾರ ಉದ್ದೇಶಿಸಿ ಇದರಿಂದಾಗಿ ಒಬ್ಬ ಹಿರಿಯ ಶ್ರೇಣಿಯ ನುರಿತ ಅಧಿಕಾರಿಯನ್ನು ಮೇಲಿನ ಉದ್ದೇಶಕ್ಕೆ ಬಳಸಿಕೊಳ್ಳಲು ಅನುವಾಗುತ್ತದೆ. ಆದುದರಿಂದ ಪ್ರಸ್ತುತ ವಿಶೇಷ ಕೋಶದ ಜಂಟಿ ನಿರ್ದೇಶಕರ ವೇತನ ಶ್ರೇಣಿ 9580-14200 ರೂ. ಬದಲಾಗಿ ಈ ಹುದ್ದೆಯನ್ನು ವೇತನ ರಹಿತ (Scale less) ಮಾರ್ಪಡಿಸಲು ತೀರ್ಮಾನಿಸಿ ಈ ಕೆಳಗಿನಂತೆ ಆದೇಶ ನೀಡಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಂಕಇ 18 ಕರಅ 2006, ಬೆಂಗಳೂರು, ದಿನಾಂಕ: 15ನೇ ಮೇ 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಜಂಟಿ ನಿರ್ದೇಶಕರ ವೇತನ ಶ್ರೇಣಿ 9580-14,200ರ ಬದಲಾಗಿ ವೇತನ ರಹಿತ (Scale less) ಹುದ್ದೆಯನ್ನಾಗಿ ಮಾರ್ಪಡಿಸಿ ಸೂಕ್ತ ಅಭ್ಯರ್ಥಿಯನ್ನು ನಿಯೋಜನೆ ಮೇಲೆ ನೇಮಿಸಿಕೊಳ್ಳಲು ಸರ್ಕಾರ ಅನುಮತಿ ನೀಡಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿ.ಸಂ. ಆಇ 233 ವೆಚ್ಚ-5/2006, ದಿನಾಂಕ: 6.4.2006 ರಲ್ಲಿ ನೀಡಿರುವ ಸಹಮತಿಯಂತೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ವಿ. ಅಶೋಕ್**

ಪಿ.ಆರ್. 759 ವಿಶೇಷಾಧಿಕಾರಿ, ಸುವರ್ಣ ಕರ್ನಾಟಕ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ.

**ಶಿಕ್ಷಣ ಸಚಿವಾಲಯ**

**ವಿಷಯ:** ಬೆಂಗಳೂರಿನ ಮಹಾರಾಣಿ ಮಹಿಳಾ ಕಲಾ ಕಾಲೇಜಿನ ಹೆಸರನ್ನು ಬದಲಾವಣೆ ಮಾಡುವ ಬಗ್ಗೆ.

**ಓದಲಾಗಿದೆ:** 1) ಸಂಖ್ಯೆ: ಕಾಶಿಇ/07/ಯೋಜನೆ/2002-03, ದಿನಾಂಕ: 03.04.2006.

**ಪ್ರಸ್ತಾವನೆ:**

ಮೇಲೆ ಕ್ರಮಾಂಕ (1) ರಲ್ಲಿ ಓದಲಾದ ದಿನಾಂಕ: 03.04.2006ರ ಪತ್ರದಲ್ಲಿ ಬೆಂಗಳೂರಿನ ಮಹಾರಾಣಿ ಮಹಿಳಾ ಕಲಾ ಕಾಲೇಜಿನಲ್ಲಿ ವಿಶಿಷ್ಟವಾದ ಕಾಂಬಿನೇಷನ್‌ಗಳುಳ್ಳ ಬಿ.ಎ., ಬಿ.ಕಾಂ., ಬಿ.ಬಿ.ಎಂ. ಹಾಗೂ ಸ್ನಾತಕೋತ್ತರ ಪದವಿಗಳನ್ನು ಬೋಧಿಸುತ್ತಿದ್ದು ಪ್ರಸ್ತುತ ಇರುವ ಕಲಾ ಕಾಲೇಜೆಂಬ ಹೆಸರನ್ನು ಬದಲಾಯಿಸಿ 'ಮಹಾರಾಣಿ ಮಹಿಳಾ ಕಲಾ, ವಾಣಿಜ್ಯ ಮತ್ತು ನಿರ್ವಹಣೆ ಮಹಾವಿದ್ಯಾಲಯ' ಎಂದು ಮರು ನಾಮಕರಣ ಮಾಡಬೇಕೆಂದು ಕಾಲೇಜು ಶಿಕ್ಷಣ ಆಯುಕ್ತರು ಕೋರಿರುತ್ತಾರೆ. ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 76 ಯುಇಸಿ 2006, ಬೆಂಗಳೂರು, ದಿನಾಂಕ: 12ನೇ ಮೇ 2006**

ಬೆಂಗಳೂರಿನ ಮಹಾರಾಣಿ ಮಹಿಳಾ ಕಲಾ ಕಾಲೇಜನ್ನು **'ಮಹಾರಾಣಿ ಮಹಿಳಾ ಕಲಾ, ವಾಣಿಜ್ಯ ಮತ್ತು ನಿರ್ವಹಣೆ ಮಹಾವಿದ್ಯಾಲಯ, ಬೆಂಗಳೂರು' (Maharani Women's Arts, Commerce and Management College, Bangalore)** ಎಂದು ಬದಲಾಯಿಸಲು ಅನುಮತಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಮೇರಿ ಜಾಯ್ಸ್**

ಪಿ.ಆರ್. 760 ಸರ್ಕಾರದ ಉಪ ಕಾರ್ಯದರ್ಶಿ, ಶಿಕ್ಷಣ ಇಲಾಖೆ (ಉನ್ನತ ಶಿಕ್ಷಣ).

**AGRICULTURE & HORTICULTURE SECRETARIAT**

**Subject:** Pilot Project on Adoption of Israeli Technology in Farmers fields.

**Read:** 1) G.O.No. AHD 101 HPP 2004, dated: 17.1.2005.
2) ಸರ್ಕಾರದ ಆದೇಶ ಸಂಖ್ಯೆ: ಕೃತೋಇ 228 ತೋಯೋಕಾ 2005, ದಿನಾಂಕ: 27.9.2005.
3) ಸರ್ಕಾರದ ಆದೇಶ ಸಂಖ್ಯೆ: ಕೃತೋಇ 71 ತೋಯೋಕಾ 2006, ದಿನಾಂಕ: 15.4.2006.
4) Cabinet decision during its meeting held on 27.4.2006

**PREAMBLE:**

1. In order to popularize cultivation of high value fruits, vegetables and flowers that increase the income of the farmers, Pilot Project on Adoption of Israeli Technology in Farmers fields was sanctioned for implementation in 10 backward taluks of the State namely, Jevargi, Afzalpur, Chincholi, Kustagi, Yalburga, Athani, Chamarajanagar, Bagepalli, Molakalmuru and Hagari bommanahalli over a period of 2 years at the rate of Rs.50,000 per acre covering 200 acres in each of the 10 taluks with an allocation of Rs.10.00 crores as per G.O. read at (1) above. The project will be implemented with 100% State Government assistance for a period of 2 years and farmers will have to incur the expenses from their own sources after 2 years.

2. Under this scheme agencies were fixed for actual implementation of the project at field level by following the procedure. The agencies will be from among the manufacturers of the drip irrigation equipments and they will be in charge of implementation of the project for the period of 5 years.

3. In order to facilitate smooth implementation of the project, Project Implementation Committee (PIC) under the Chairmanship of the Director of Horticulture was constituted as per G.O. read (2) above.

4. This scheme has been continued as an ongoing scheme during the 2006-07 with an allocation of Rs.500 lakhs under the Head of Account 2401-00-119-2-06 as per G.O read at (3) above.

5. At the time of implementing the project at field level through drip manufacturing agencies it came to light that the norms laid by the Government regarding the cost was not feasible. Hence, it was decided to enhance the unit cost per acre as the project is implemented for the benefit of small and marginal farmers who cannot be further burdened. This matter has been examined and it is ordered as below.

**GOVERNMENT ORDER No. AHD 20 HPP 2005, Bangalore, Dated: 8th May 2006**

Government is pleased to enhance the package under the scheme "Pilot Project on Adoption of Israeli Technology in Farmers fields" (Head of Account 2401-00-119-2-06) from Rs.50,000 per acre to Rs.70,000 per acre in 10 backward taluks of the State and reduce the coverage from 100 acres in each of the 10 taluks to 72 acres in the first year. The scheme will be implemented in Jevargi, Afzalpur, Bidar, Kustagi, Yalburga, Athani, Chamarajanagar, Bagepalli, Molakalmuru and Pavagada. Rest of the guidelines as ordered in Government Order No. AHD 101 HPP 2004, dated: 17.01.2005 and G.O. No. ಕೃತೋಇ 228 ತೋಯೋಕಾ 2005, dated: 27.9.2005 will continue.

By Order and in the name of the Governor of Karnataka,

**N. MANJULA GEETHA**

P.R. 762

Under Secretary to Government,
Agriculture & Horticulture Department.

**ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ**

**ವಿಷಯ:** 2006-07ನೇ ಸಾಲಿನ ಒಂದನೇ ಕಂತಿನ ಶಾಸನಬದ್ಧ ಅನುದಾನವನ್ನು ಗ್ರಾಮ ಪಂಚಾಯತಿಗಳಿಗೆ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:** 1) ಆರ್ಥಿಕ ಇಲಾಖೆ ಅ.ಟಿ.ಸಂಖ್ಯೆ: ಆಇ 520 ವೆಚ್ಚ-6/06, ದಿನಾಂಕ: 25.04.2006.

**ಪ್ರಸ್ತಾವನೆ:**

2006-07ನೇ ಸಾಲಿಗೆ ರಾಜ್ಯದ ಎಲ್ಲಾ ಗ್ರಾಮ ಪಂಚಾಯತಿಗಳಿಗೆ ಶಾಸನಬದ್ಧ ಅನುದಾನವನ್ನು ಆಯವ್ಯಯ ಲೆಕ್ಕ ಶೀರ್ಷಿಕೆ 2515-00-198-1-07 (ಯೋಜನೆ) ಅಡಿ ಒಟ್ಟಾರೆ 28265 ಲಕ್ಷ ರೂಪಾಯಿಗಳನ್ನು ಒದಗಿಸಲಾಗಿದೆ. ಈ ಅನುದಾನದಿಂದ ಪ್ರತಿ ಗ್ರಾಮ ಪಂಚಾಯತಿಗೆ ವಾರ್ಷಿಕವಾಗಿ ತಲಾ 5.00 ಲಕ್ಷ ರೂಪಾಯಿಗಳು ಲಭ್ಯವಾಗುತ್ತದೆ. 2006-07ನೇ ಸಾಲಿಗೆ ಒಂದನೇ ತ್ರೈಮಾಸಿಕ ವೆಚ್ಚಕ್ಕಾಗಿ ಪ್ರಸ್ತಾಪಿತ ಲೆಕ್ಕ ಶೀರ್ಷಿಕೆಯಿಂದ ಒಟ್ಟು ರೂ.7065.00 ಲಕ್ಷಗಳನ್ನು ಉಲ್ಲೇಖ (1) ರಲ್ಲಿ ತಿಳಿಸಿರುವ ಅನಧಿಕೃತ ಟಿಪ್ಪಣಿಯಲ್ಲಿ ಆರ್ಥಿಕ ಇಲಾಖೆಯು ಬಿಡುಗಡೆ ಮಾಡಿರುತ್ತದೆ. ಪ್ರತಿ ಗ್ರಾಮ ಪಂಚಾಯತಿಗೆ ಸರಾಸರಿ ರೂ.1.25 ಲಕ್ಷ ಲಭ್ಯವಾಗಲಿದೆ.

2006-07ನೇ ಸಾಲಿನ ಒಂದನೇ ಕಂತಿನ ಅನುದಾನ ಒಟ್ಟು ರೂ.7065 ಲಕ್ಷಗಳನ್ನು ಆರ್ಥಿಕ ಇಲಾಖೆಯು ಉಲ್ಲೇಖ (1) ರಲ್ಲಿ ತಿಳಿಸಿರುವ ಅನಧಿಕೃತ ಟಿಪ್ಪಣಿಯಲ್ಲಿ ಬಿಡುಗಡೆ ಮಾಡಿರುತ್ತದೆ. ಈ ಅನುದಾನವನ್ನು ರಾಜ್ಯದ ಎಲ್ಲಾ ಗ್ರಾಮ ಪಂಚಾಯತಿಗಳಿಗೆ ಸಮನಾಗಿ ಬಿಡುಗಡೆ ಮಾಡಲು ಉದ್ದೇಶಿಸಲಾಗಿದೆ. ಪ್ರಸ್ತಾವನೆಯನ್ನು ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಗ್ರಾಅಪ 167 ಗ್ರಾಪಂಅ 2006, ಬೆಂಗಳೂರು, ದಿನಾಂಕ: 26ನೇ ಏಪ್ರಿಲ್ 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ 2006-07ನೇ ಸಾಲಿನ ಶಾಸನಬದ್ಧ ಅನುದಾನದ 1ನೇ ಕಂತಿನ ಮೊತ್ತ ರೂ.7065.00 ಲಕ್ಷಗಳನ್ನು (ಏಳು ಸಾವಿರದ ಅರವತ್ತೈದು ಲಕ್ಷ) ರೂಪಾಯಿಗಳನ್ನು ಬಿಡುಗಡೆ ಮಾಡಿ ಆದೇಶಿಸಿದೆ. ಈ ವೆಚ್ಚವನ್ನು 2006-07ನೇ ಸಾಲಿನ ಲೆಕ್ಕ ಶೀರ್ಷಿಕೆ 2515-00-198-1-07 (ಯೋಜನೆ) ಅಡಿ ಆಯವ್ಯಯ ಅವಕಾಶದಲ್ಲಿ ಭರಿಸಲಾಗಿದೆ. ಈ ಅನುದಾನದ ಮೊತ್ತವನ್ನು ಫೇಯಿಸ್ ರಸೀದಿಯ ಮೇಲೆ ಪಡೆದು ಸಿಂಡಿಕೇಟ್ ಬ್ಯಾಂಕ್, ಬೆಂಗಳೂರು ನಗರ ನೀರು ಸರಬರಾಜು ಮಂಡಳಿ ಶಾಖೆ, ಮೈಸೂರು ಬ್ಯಾಂಕ್ ವೃತ್ತ, ಬೆಂಗಳೂರು ಇಲ್ಲಿ ತೆರೆದಿರುವ ಖಾತೆಯ ಮುಖಾಂತರ ರಾಜ್ಯದ ಎಲ್ಲಾ ಗ್ರಾಮ ಪಂಚಾಯತಿಗಳ ಸ್ಥಳೀಯ ಬ್ಯಾಂಕ್ ಖಾತೆಗೆ ಜಮಾ ಮಾಡಲು ಆದೇಶಿಸಿದೆ. ಈ ಅನುದಾನವನ್ನು ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ 1993ರ ಕಲಂ 206ರ ಅಡಿಯಲ್ಲಿ ವಿವರಿಸಿರುವ ಉದ್ದೇಶಗಳಿಗೆ ಭರಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ: ಎಫ್‌ಡಿ 520 ವೆಚ್ಚ-6 2006, ದಿನಾಂಕ: 25.04.2006 ರಲ್ಲಿ ಸಹಮತಿ ಪಡೆದು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಎಸ್. ಶಾಮಸುಂದರ**

ಪಿ.ಆರ್. 764

ಸರ್ಕಾರದ ಅಧೀನ ಕಾರ್ಯದರ್ಶಿ,
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ.

**ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ**

**ವಿಷಯ:** ಡಾ: ಸಿ.ಡಿ. ಅಶ್ವಿನಿ, ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿ, ಇವರನ್ನು ಸೇವೆಯಿಂದ ವಜಾಗೊಳಿಸುವ ಬಗ್ಗೆ.

**ಓದಲಾಗಿದೆ:** ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು ಇವರ ಪತ್ರ ಸಂಖ್ಯೆ: ಡಿಪಿಜಿ ಮೈವಿ : 69 : 2003-04, ದಿನಾಂಕ: 19.03.2004.

**ಪ್ರಸ್ತಾವನೆ:**

ಮೇಲೆ ಓದಲಾದ ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು, ಇವರ ಪ್ರಸ್ತಾವನೆಯಲ್ಲಿ ಡಾ: ಸಿ.ಡಿ.ಅಶ್ವಿನಿ, ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿ, ಕೌಡ್ಲ, ಮದ್ದೂರು ತಾಲ್ಲೂಕು, ಮಂಡ್ಯ ಜಿಲ್ಲೆ ಇವರು ದಿನಾಂಕ: 12.09.2002 ರಿಂದ ಖಾಯಂ ವೈದ್ಯರಾಗಿ ಸೇವೆ ಸಲ್ಲಿಸುತ್ತಿದ್ದು ದಿನಾಂಕ: 20.11.2003 ರಿಂದ ಸೇವೆಗೆ ಅನಧಿಕೃತ ಗೈರುಹಾಜರಾಗಿರುತ್ತಾರೆ ಹಾಗೂ ಸರ್ಕಾರದ ಪೂರ್ವಾನುಮತಿ ಪಡೆಯದೆ ಸ್ನಾತಕೋತ್ತರ ವ್ಯಾಸಂಗಕ್ಕೆ ತೆರಳಿರುತ್ತಾರೆಂದು ತಿಳಿಸುತ್ತಾರೆ. ಖಾಯಂ ಪೂರ್ವ ಸೇವಾವಧಿಯಲ್ಲಿಯೇ ಅನಧಿಕೃತ ಗೈರುಹಾಜರಿಯಾಗಿ ಕರ್ತವ್ಯ ಲೋಪ ಎಸಗಿರುವುದರಿಂದ ಕರ್ನಾಟಕ ನಾಗರೀಕ ಸೇವಾ (ಪ್ರೊಬೇಷನ್) ನಿಯಮಾವಳಿ 1977ರ ಉಪ ನಿಯಮ 6(1) (2)ರ ಪ್ರಕಾರ ಸರ್ಕಾರಿ ಸೇವೆಯಿಂದ ವಿಮೋಚನೆಗೊಳಿಸಲು ಕೋರಿರುತ್ತಾರೆ. ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು ಇವರ ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಆಕುಕ 385 ಹೆಚ್‌ಎಸ್‌ಹೆಚ್ 2004, ಬೆಂಗಳೂರು, ದಿನಾಂಕ: 3ನೇ ಮೇ 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಡಾ: ಸಿ.ಡಿ. ಅಶ್ವಿನಿ, ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿ, ಪ್ರಾಥಮಿಕ ಆರೋಗ್ಯ ಕೇಂದ್ರ, ಕೌಡ್ಲ, ಮದ್ದೂರು ತಾಲ್ಲೂಕು, ಮಂಡ್ಯ ಜಿಲ್ಲೆ ಇವರು ದಿನಾಂಕ: 20.11.2003 ರಿಂದ ಖಾಯಂ ಪೂರ್ವ ಸೇವಾವಧಿಯಲ್ಲಿ ಕರ್ತವ್ಯಕ್ಕೆ ಅನಧಿಕೃತ ಗೈರುಹಾಜರಾಗಿ ಕರ್ತವ್ಯಚ್ಯುತಿ ಎಸಗಿರುವುದರಿಂದ ಸದರಿಯವರನ್ನು ದಿನಾಂಕ: 20.11.2003 ರಿಂದ ಜಾರಿಗೆ ಬರುವಂತೆ ಕರ್ನಾಟಕ ನಾಗರೀಕ ಸೇವಾ (ಖಾಯಂಪೂರ್ವ) ನಿಯಮಾವಳಿ 1977ರ ನಿಯಮ 6(1)(2)ರ ಅಡಿಯಲ್ಲಿ ಸರ್ಕಾರಿ ಸೇವೆಯಿಂದ ವಿಮೋಚನೆಗೊಳಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ.ಎನ್. ನಾರಾಯಣ ಗೌಡ**

ಪಿ.ಆರ್. 765

ಸರ್ಕಾರದ ಅಧೀನ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ಸೇವೆಗಳು-1).

**ಕಂದಾಯ ಸಚಿವಾಲಯ**

**ತಿದ್ದುಪಡಿ ಸಂಖ್ಯೆ: ಕಂಇ 29 ಮುನೊಸೊ 2005, ಬೆಂಗಳೂರು, ದಿನಾಂಕ: 2ನೇ ಮೇ 2006**

ಸರ್ಕಾರಿ ಆದೇಶ ಸಂಖ್ಯೆ: ಕಂಇ 29 ಮುನೊಸೊ 2005, ದಿನಾಂಕ: 26.04.2006 ರ, ಓದಲಾದ ಕ್ರಮ ಸಂಖ್ಯೆ 2ರ ದಿನಾಂಕವನ್ನು 23.07.2007ರ ಬದಲಾಗಿ "ದಿನಾಂಕ: 23.07.2005" ಎಂದು ಹಾಗೂ ಆದೇಶದ ಪ್ರಸ್ತಾವನೆಯಲ್ಲಿ ನಮೂದಿಸಿರುವ ರಿಟ್ ಅರ್ಜಿ ಸಂಖ್ಯೆ: 93444/05ರ ಬದಲಾಗಿ "ಅರ್ಜಿ ಸಂಖ್ಯೆ: 9444/03" ಎಂದು ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಶಿವಲಿಂಗ**

ಪಿ.ಆರ್. 768

ಪೀಠಾಧಿಕಾರಿ, ಕಂದಾಯ ಇಲಾಖೆ (ನೋಂದಣಿ ಮತ್ತು ಮುದ್ರಾಂಕ).

**ನಗರಾಭಿವೃದ್ಧಿ ಸಚಿವಾಲಯ**

**ವಿಷಯ:** ಶ್ರೀ ಎಲ್.ಆರ್. ರುದ್ರಯ್ಯ, ನಗರ ಯೋಜನಾ ಜಂಟಿ ನಿರ್ದೇಶಕರು (ನಿವೃತ್ತ) ಇವರನ್ನು ನಗರ ಯೋಜನಾ ಇಲಾಖೆಯ ಸಮಾಲೋಚಕರನ್ನಾಗಿ ಮುಂದುವರೆಸುವ ಬಗ್ಗೆ ಹಾಗೂ ಇವರ ಒಪ್ಪಂದದ ನೇಮಕಾತಿ ಹಾಗೂ ನಿಬಂಧನೆ ಮತ್ತು ಷರತ್ತುಗಳ ಬಗ್ಗೆ.

**ಓದಲಾಗಿದೆ:**
1) ಸರ್ಕಾರಿ ಆದೇಶ ಸಂಖ್ಯೆ: ಯುಡಿಡಿ 130 ನಯೋಸೇ 99, ದಿನಾಂಕ: 7.11.2002.
2) ತಿದ್ದುಪಡಿ ಆದೇಶ ಸಂಖ್ಯೆ: ಯುಡಿಡಿ 130 ನಯೋಸೇ 99, ದಿನಾಂಕ: 21.11.2002.
3) ಸರ್ಕಾರಿ ಆದೇಶ ಸಂಖ್ಯೆ: ನಅಇ 130 ನಯೋಸೇ 99, ದಿನಾಂಕ: 28.8.2003.
4) ಸರ್ಕಾರದ ಆದೇಶ ಸಂಖ್ಯೆ: ನಅಇ 130 ನಯೋಸೇ 2004, ದಿನಾಂಕ: 19.6.2004.
5) ಸರ್ಕಾರದ ಆದೇಶ ಸಂಖ್ಯೆ: ನಅಇ 170 ನಯೋಸೇ 2004, ದಿನಾಂಕ: 28.2.2005.
6) ಸಂಖ್ಯೆ: ನಯೋ:ಸಿ(2):523:2005, ದಿನಾಂಕ: 16.11.2005 ನಿರ್ದೇಶಕರು, ನಗರ ಯೋಜನಾ ಇಲಾಖೆ.

**ಪ್ರಸ್ತಾವನೆ:**

ಶ್ರೀ ಎಲ್.ಆರ್. ರುದ್ರಯ್ಯ, ನಗರ ಯೋಜನಾ ಜಂಟಿ ನಿರ್ದೇಶಕರು (ನಿವೃತ್ತ) ಇವರನ್ನು ಮೇಲೆ ಓದಲಾದ (1) ಮತ್ತು (2)ರ ಸರ್ಕಾರಿ ಆದೇಶದಲ್ಲಿ ದಿನಾಂಕ: 7.11.2002 ರಿಂದ ಜಾರಿಗೆ ಬರುವಂತೆ ನಗರ ಯೋಜನಾ ಇಲಾಖೆಗೆ ಸಮಾಲೋಚಕರನ್ನಾಗಿ ಒಪ್ಪಂದದ ಮೇರೆಗೆ ನೇಮಕ ಮಾಡಲಾಗಿತ್ತು. ನಂತರ ಮೇಲೆ ಓದಲಾದ (3), (4) ಮತ್ತು (5) ಸರ್ಕಾರಿ ಆದೇಶಗಳಲ್ಲಿ ಕಾಲಕಾಲಕ್ಕೆ ಮುಂದುವರೆಸಲಾಗಿತ್ತು.

ಮೇಲೆ ಓದಲಾದ (6)ರ ಪತ್ರದಲ್ಲಿ ನಗರ ಯೋಜನಾ ನಿರ್ದೇಶಕರು, ನಗರ ಯೋಜನಾ ಇಲಾಖೆಯು ಏಷಿಯನ್ ಬ್ಯಾಂಕ್ ಡೆವಲಪ್‌ಮೆಂಟ್ ಬ್ಯಾಂಕ್ ನಿಧಿಯಿಂದ 18 ನಗರಗಳ ಮೂಲನಕ್ಷೆ ಏರಿಯಲ್ ಫೋಟೋಗ್ರಫಿಯ ಮೂಲಕ ತಯಾರಿಸುವ ಕೆಲಸವನ್ನು ಮತ್ತು ವಿಶ್ವಬ್ಯಾಂಕ್‌ನಿಂದ ಸಾಲ ಪಡೆದು ಉಳಿದ 2002 ನಗರ/ಪಟ್ಟಣಗಳ ಮೂಲ ನಕ್ಷೆಯನ್ನು ಏರಿಯಲ್ ಫೋಟೋಗ್ರಫಿಯ ಮೂಲಕ 3 ರಿಂದ 4 ವರ್ಷಗಳ ಅವಧಿಯಲ್ಲಿ ಮುಗಿಸಲು ಯೋಜನೆಯನ್ನು ಹಾಕಿಕೊಂಡಿದ್ದು, ಇದೊಂದು ತಾಂತ್ರಿಕವಾಗಿ ವಿಶೇಷ ವಿಷಯವಾಗಿರುವುದರಿಂದ ಶ್ರೀ ಎಲ್.ಆರ್. ರುದ್ರಯ್ಯ ಇವರ ಸೇವೆಯು ಅತ್ಯಾವಶ್ಯಕವಾಗಿದ್ದು ಇವರ ಸೇವೆಯನ್ನು ದಿನಾಂಕ: 6.11.2005 ರಿಂದ ಒಂದು ವರ್ಷ ಅವಧಿಗೆ ಮುಂದುವರೆಸುವಂತೆ ಹಾಗೂ ಇವರ ಸಂಭಾವನೆಯನ್ನು ಮಾಹೆಯಾನ ರೂ.15,000-00 ವನ್ನು ಲೆಕ್ಕ ಶೀರ್ಷಿಕೆಯಿಂದ ಭರಿಸಲು ಆದೇಶವನ್ನು ಹೊರಡಿಸುವಂತೆ ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ನಅಇ 151 ನಯೋಸೇ 2005, ಬೆಂಗಳೂರು, ದಿನಾಂಕ: 8ನೇ ಮೇ 2006**

ಶ್ರೀ ಎಲ್.ಆರ್. ರುದ್ರಯ್ಯ, ನಗರ ಯೋಜನಾ ಜಂಟಿ ನಿರ್ದೇಶಕರು (ನಿವೃತ್ತ) ಇವರನ್ನು ದಿನಾಂಕ: 6.11.2005 ರಿಂದ ಜಾರಿಗೆ ಬರುವಂತೆ ಒಂದು ವರ್ಷದ ಅವಧಿಗೆ ನಗರ ಯೋಜನಾ ಇಲಾಖೆಗೆ ಸಮಾಲೋಚಕರನ್ನಾಗಿ ಒಪ್ಪಂದದ ಮೇರೆಗೆ ನೇಮಕ ಮಾಡಲಾಗಿದೆ.

**ಒಪ್ಪಂದದ ನೇಮಕಾತಿಯ ನಿಬಂಧನೆ ಹಾಗೂ ಷರತ್ತುಗಳು ಈ ಕೆಳಕಂಡಂತಿವೆ:**

1) ಶ್ರೀ ಎಲ್.ಆರ್. ರುದ್ರಯ್ಯ, ನಗರ ಯೋಜನಾ ಜಂಟಿ ನಿರ್ದೇಶಕರು (ನಿವೃತ್ತ) ಇವರ ಒಪ್ಪಂದದ ನೇಮಕಾತಿ ಅವಧಿಯು ದಿನಾಂಕ: 6.11.2005 ರಿಂದ ಒಂದು ವರ್ಷ ಅಥವಾ ಮುಂದಿನ ಆದೇಶ ಹೊರಡಿಸುವವರೆಗೆ ಇವೆರಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಮಾತ್ರ ಇದ್ದು, ಇದೊಂದು ತಾತ್ಕಾಲಿಕ ನೇಮಕಾತಿಯಾಗಿರುತ್ತದೆ.
2) ಇವರ ಒಪ್ಪಂದದ ನೇಮಕಾತಿಗೆ ಕ್ರೂಢೀಕೃತ ಮಾಸಿಕ ಸಂಬಳ ರೂ.15,000-00 (ರೂಪಾಯಿ ಹದಿನೈದು ಸಾವಿರ ಮಾತ್ರ) ಗಳಿಗೆ ನಿಗದಿಪಡಿಸಲಾಗಿದೆ. ಇದಲ್ಲದೆ ಇನ್ನಿತರೆ ಯಾವುದೇ ಭತ್ಯೆಗಳಿಗೆ ಅರ್ಹರಾಗಿರುವುದಿಲ್ಲ.

3) ಇವರು ಸಾರ್ವಜನಿಕ ಹಿತದೃಷ್ಟಿಯಿಂದ ಪ್ರಯಾಣ ಮಾಡಬೇಕಾದಲ್ಲಿ ಇವರ ನಿವೃತ್ತಿ ಸಮಯದಲ್ಲಿ ಪಡೆಯುತ್ತಿದ್ದ ಮೂಲ ವೇತನದ ಕಾಲ್ಪನಿಕ ಮೂಲವೇತನವಾದ ರೂ.10,100ಕ್ಕೆ ಲಭ್ಯವಾಗುವ ಪ್ರಯಾಣಭತ್ಯೆ ಹಾಗೂ ದಿನಭತ್ಯೆಯನ್ನು ಪಡೆಯಲು ಅರ್ಹರಿರುತ್ತಾರೆ.
4) ಒಪ್ಪಂದದ ಷರತ್ತು ಮತ್ತು ನಿಬಂಧನೆಗಳಲ್ಲಿ ನೀಡಿರುವ ಸೌಲಭ್ಯಗಳ ಹೊರತಾಗಿ ಬೇರಾವುದೇ ಸೌಲಭ್ಯ ಅಂದರೆ ವೇತನ ಬಡ್ತಿ, ಪದೋನ್ನತಿ, ಪಿಂಚಣಿ ಇತ್ಯಾದಿ ಸೌಲಭ್ಯಗಳಿಗೆ ಅರ್ಹರಾಗಿರುವುದಿಲ್ಲ.
5) ಸದರಿ ಅಧಿಕಾರಿಗಳು ದುರ್ವರ್ತನೆ, ನಿರ್ಲಕ್ಷ್ಯತೆಯ ನಿಮಿತ್ತ ಸರ್ಕಾರಕ್ಕೆ ಸಂಭವಿಸಬಹುದಾದ ಎಲ್ಲಾ ನಷ್ಟಗಳನ್ನು ಸರ್ಕಾರಕ್ಕೆ ಭರಿಸಿಕೊಡಲು ಬದ್ಧರಾಗಿರತಕ್ಕದ್ದು.
6) ಶ್ರೀಯುತರನ್ನು ಕನ್ಸಲ್ಟೆಂಟ್ (ಸಮಾಲೋಚಕ) ಆಗಿ ನೇಮಕ ಮಾಡಿರುವ ಅವಧಿಯು ಯಾವುದೇ ಉದ್ದೇಶಕ್ಕೂ ಅರ್ಹತಾದಾಯಕ ಸೇವೆಯಲ್ಲವೆಂದು ಹಾಗೂ ರೂ.15,000-00 ಸಂಚಿತ ಸಂಭಾವನೆ ಮೇಲೆ ಯಾವುದೇ ಭತ್ಯೆಗಳನ್ನು ಪಡೆಯುವಂತಿಲ್ಲ.
7) ಇವರು ತಮ್ಮ ಕರ್ತವ್ಯ ಕಾರ್ಯಪ್ರಕಾರಗಳನ್ನು ಶ್ರದ್ಧೆ ಮತ್ತು ಆಸಕ್ತಿಯಿಂದ ನಿರ್ವಹಿಸತಕ್ಕದ್ದು.
8) ಇವರು ತಮ್ಮ ಕರ್ತವ್ಯಗಳನ್ನು ಪಾಲಿಸುತ್ತಿರುವಾಗ ಅಥವಾ ನೆರವೇರಿಸುತ್ತಿರುವಾಗ ಲಭ್ಯವಾಗಬಹುದಾದ ಅಥವಾ ದೊರಕಬಹುದಾದ ಅಧಿಕೃತ ಮಾಹಿತಿಯನ್ನು ಗೌಪ್ಯವಾಗಿಟ್ಟು ಕಟ್ಟುನಿಟ್ಟಾಗಿ ಪಾಲಿಸತಕ್ಕದ್ದು.
9) ಈ ಒಪ್ಪಂದದ ಷರತ್ತುಗಳನ್ನು ಉಲ್ಲಂಘಿಸಿದಲ್ಲಿ ಗುತ್ತಿಗೆ ನೇಮಕಾತಿಯು ತಾನಾಗಿಯೇ ಮುಕ್ತಾಯವಾಗುತ್ತದೆ.
10) ಇವರ ದುರ್ನಡತೆಯಿಂದಾಗಿ ಅಥವಾ ನಿರ್ಲಕ್ಷ್ಯತೆ ಉದಾಸೀನತೆಯಿಂದಾಗಲೀ ಮತ್ತು ಸರ್ಕಾರಕ್ಕೆ ಸಂಬಂಧಿಸಿದಂತೆ ಆರ್ಥಿಕ ನಷ್ಟವನ್ನು ಸರ್ಕಾರಕ್ಕೆ ತುಂಬಿಕೊಡಲು ಹೊಣೆಗಾರರಾಗಿರುತ್ತಾರೆ.
11) ಈ ಆದೇಶವನ್ನು ಸ್ವೀಕರಿಸಿ 7 ದಿನಗಳೊಳಗಾಗಿ ರೂ.50-00 ಗಳ ಮೌಲ್ಯದ ಛಾಪಾ ಕಾಗದದಲ್ಲಿ ಸದರಿ ನೇಮಕಾತಿಯ ಷರತ್ತು ಮತ್ತು ನಿಬಂಧನೆಗಳನ್ನೊಳಗೊಂಡಿರುವ ಕರಾರು ಪತ್ರವನ್ನು ಕ್ರಮಬದ್ಧ ರೀತಿಯಲ್ಲಿ ಒಪ್ಪಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 290 ವೆಚ್ಚ-9 2005 ದಿನಾಂಕ: 10.4.2006 ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ. ರಂಗನಾಥ್**

ಪಿ.ಆರ್. 767 ಸರ್ಕಾರದ ಅಧೀನ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ.

## ಲೋಕೋಪಯೋಗಿ ಸಚಿವಾಲಯ

**ವಿಷಯ:** ಹೊಳೆನರಸೀಪುರ ತಾಲ್ಲೂಕಿನ ಗ್ರಾಮೀಣ ರಸ್ತೆಯನ್ನು ಜಿಲ್ಲಾ ಮುಖ್ಯ ರಸ್ತೆಯನ್ನಾಗಿ ಮೇಲ್ದರ್ಜೆಗೇರಿಸುವ ಬಗ್ಗೆ.

**ಓದಲಾಗಿದೆ:** ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದ) ಬೆಂಗಳೂರು ಇವರ ಪತ್ರ ಸಂಖ್ಯೆ: ಮುಇಂ:ಲೋಇ:ಹಾವ್ಯಹಾ: ಎಇ:ಹೊನಪುರ:ಕಾ:ಪಟ್ಟಿ 2005-06, ದಿನಾಂಕ: 3.5.2006.

**ಪ್ರಸ್ತಾವನೆ:**

ಮೇಲೆ ಓದಲಾದ ಪತ್ರದಲ್ಲಿ ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ಬೆಂಗಳೂರು ರವರು ಹೊಳೆನರಸೀಪುರ ತಾಲ್ಲೂಕಿನ ಸಿ.ಎನ್.ಎಸ್.ರಸ್ತೆ ಕಿಮೀ 48 ರಿಂದ ಗೊಂದಿಮಲ್ಲೇನಹಳ್ಳಿ 6.00 ಕಿಮೀ. ಗ್ರಾಮೀಣ ರಸ್ತೆಯನ್ನು ಜಿಲ್ಲಾ ಮುಖ್ಯ ರಸ್ತೆಯನ್ನಾಗಿ ಮೇಲ್ದರ್ಜೆಗೇರಿಸುವಂತೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಆದುದರಿಂದ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಲೋಇ 103 ಸಿಆರ್‌ಎಂ 2006, ಬೆಂಗಳೂರು, ದಿನಾಂಕ: 6ನೇ ಮೇ 2006**

ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ಬೆಂಗಳೂರು ಇವರು ಸಲ್ಲಿಸಿರುವ ಪ್ರಸ್ತಾವನೆಯನ್ನು ಪರಿಶೀಲಿಸಲಾಗಿ ಹೊಳೆನರಸೀಪುರ ತಾಲ್ಲೂಕಿನ ಸಿ.ಎನ್.ಎಸ್. ರಸ್ತೆ ಕಿಮೀ. 48 ರಿಂದ ಗೊಂದಿಮಲ್ಲೇನಹಳ್ಳಿ 6.00 ಕಿಮೀ. ಗ್ರಾಮೀಣ ರಸ್ತೆಯನ್ನು ಜಿಲ್ಲಾ ಮುಖ್ಯ ರಸ್ತೆಯನ್ನಾಗಿ ಮೇಲ್ದರ್ಜೆಗೇರಿಸಿ ಲೋಕೋಪಯೋಗಿ ಇಲಾಖೆಯ ವ್ಯಾಪ್ತಿಗೆ ತೆಗೆದುಕೊಳ್ಳಲು ಸರ್ಕಾರದ ಅನುಮೋದನೆ ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಡಿ.ಆರ್. ಶಶಿಧರ್**

ಪಿ.ಆರ್. 770 ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರ), ಲೋಕೋಪಯೋಗಿ ಇಲಾಖೆ (ಸಂಪರ್ಕ).

**ವಿಷಯ:** ಶಿವಮೊಗ್ಗ ಜಿಲ್ಲೆ ಭದ್ರಾವತಿ ತಾಲ್ಲೂಕಿನಲ್ಲಿ ಬರುವ ಎರಡು ಜಿಲ್ಲಾ ಮುಖ್ಯ ರಸ್ತೆಗಳನ್ನು ರಾಜ್ಯ ಹೆದ್ದಾರಿಗಳನ್ನಾಗಿ ಮೇಲ್ದರ್ಜೆಗೇರಿಸುವ ಬಗ್ಗೆ.

**ಓದಲಾಗಿದೆ:** ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ಇವರ ಪತ್ರಸಂಖ್ಯೆ: ಮುಇಂ:ಸಂಕದ:ರಸ್ತೆ ಶಾಖೆ:ಮೇಲ್ದರ್ಜೆ: ಭದ್ರಾವತಿ:ಸಇಂ-3:06-07, ದಿನಾಂಕ: 22.04.2006.

**ಪ್ರಸ್ತಾವನೆ:**

ಮೇಲೆ ಓದಲಾದ ಪತ್ರದಲ್ಲಿ ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ಬೆಂಗಳೂರು ಇವರು ಶಿವಮೊಗ್ಗ ಜಿಲ್ಲೆ, ಭದ್ರಾವತಿ ತಾಲ್ಲೂಕಿಗೆ ಸಂಬಂಧಿಸಿದಂತೆ ಈ ಕೆಳಗಿನ ಎರಡು ಜಿಲ್ಲಾ ಮುಖ್ಯ ರಸ್ತೆಗಳನ್ನು ಹೊಳೆಹೊನ್ನೂರು ವಿಧಾನಸಭಾ ಕ್ಷೇತ್ರದ ಶಾಸಕರು ಸನ್ಮಾನ್ಯ ಮುಖ್ಯಮಂತ್ರಿಯವರಿಗೆ ಸಲ್ಲಿಸಿರುವ ಮನವಿಪತ್ರದಲ್ಲಿ ಪ್ರಸ್ತಾಪಿಸಿರುವಂತೆ ಹಾಗೂ ಮುಖ್ಯಮಂತ್ರಿಯವರು ನೀಡಿರುವ ಸೂಚನೆಯಂತೆ ಸದರಿ ಜಿಲ್ಲಾ ಮುಖ್ಯ ರಸ್ತೆಗಳನ್ನು ರಾಜ್ಯ ಹೆದ್ದಾರಿಗಳನ್ನಾಗಿ ಮೇಲ್ದರ್ಜೆಗೇರಿಸಬೇಕೆಂದು ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ), ಬೆಂಗಳೂರು ಇವರು ಶಿಫಾರಸ್ಸು ಮಾಡಿರುತ್ತಾರೆ. ಆದುದರಿಂದ ಈ ಕೆಳಗಿನ ಆದೇಶ.

| ಕ್ರಮ ಸಂಖ್ಯೆ | ರಾಜ್ಯ ಹೆದ್ದಾರಿ ಸಂಖ್ಯೆ | ರಾಜ್ಯ ಹೆದ್ದಾರಿಗಳನ್ನಾಗಿ ಮೇಲ್ದರ್ಜೆಗೇರಿಸುವ ವಿವರ | ರಾಜ್ಯ ಹೆದ್ದಾರಿ ಉದ್ದ (ಕಿ.ಮೀ.) |
|---|---|---|---|
| 1 | 115 | ಕೂಡ್ಲಿಗೆರೆ ಕಮ್ಮಾರಘಟ್ಟ ರಸ್ತೆ | 35.80 |
| 2 | 116 | ತುಮಕೂರು ಹೊನ್ನಾವರ ರಸ್ತೆಯಿಂದ ಭದ್ರಾವತಿ ಶಿವನಿ ರಸ್ತೆಯ ಮೂಲಕ ಬೀರೂರು ಸಮ್ಮಸಗಿ ರಾಜ್ಯ ಹೆದ್ದಾರಿಯನ್ನು ಸಂಪರ್ಕಿಸುವ ರಸ್ತೆ, | 34.20 |

**ಸರ್ಕಾರಿ ಆದೇಶ ಸಂಖ್ಯೆ: ಲೋಇ 95 ಸಿಆರ್‌ಎಂ 2006, ಬೆಂಗಳೂರು, ದಿನಾಂಕ: 5ನೇ ಮೇ 2006**

ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ಬೆಂಗಳೂರು ಇವರ ಪ್ರಸ್ತಾವನೆಯನ್ನು ಪರಿಶೀಲಿಸಲಾಗಿ, ಶಿವಮೊಗ್ಗ ಜಿಲ್ಲೆ, ಭದ್ರಾವತಿ ತಾಲ್ಲೂಕಿನ ಈ ಕೆಳಗಿನ ಎರಡು ಮುಖ್ಯ ರಸ್ತೆಗಳನ್ನು ರಾಜ್ಯ ಹೆದ್ದಾರಿಗಳೆಂದು ನಾಮಕರಣ ಮಾಡಿ ಘೋಷಿಸಿದೆ.

| ಕ್ರಮ ಸಂಖ್ಯೆ | ರಾಜ್ಯ ಹೆದ್ದಾರಿ ಸಂಖ್ಯೆ | ರಾಜ್ಯ ಹೆದ್ದಾರಿಗಳನ್ನಾಗಿ ಮೇಲ್ದರ್ಜೆಗೇರಿಸುವ ವಿವರ | ರಾಜ್ಯ ಹೆದ್ದಾರಿ ಉದ್ದ (ಕಿ.ಮೀ.) |
|---|---|---|---|
| 1 | 115 | ಕೂಡ್ಲಿಗೆರೆ ಕಮ್ಮಾರಘಟ್ಟ ರಸ್ತೆ | 35.80 |
| 2 | 116 | ತುಮಕೂರು ಹೊನ್ನಾವರ ರಸ್ತೆಯಿಂದ ಭದ್ರಾವತಿ ಶಿವನಿ ರಸ್ತೆಯ ಮೂಲಕ ಬೀರೂರು ಸಮ್ಮಸಗಿ ರಾಜ್ಯ ಹೆದ್ದಾರಿಯನ್ನು ಸಂಪರ್ಕಿಸುವ ರಸ್ತೆ, | 34.20 |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಡಿ.ಆರ್. ಶಶಿಧರ್**

ಪಿ.ಆರ್. 771 ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರ), ಲೋಕೋಪಯೋಗಿ ಇಲಾಖೆ (ಸಂಪರ್ಕ).

## ಸಹಕಾರ ಸಚಿವಾಲಯ

**ವಿಷಯ:** ತುಮಕೂರು ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕ್ ನಿ., ಇದರ 2004-05ನೇ ಸಾಲಿನ ವಾರ್ಷಿಕ ಮಹಾ ಸಭೆಯನ್ನು ನಡೆಸಲು ಅವಧಿ ವಿಸ್ತರಣೆ ಬಗ್ಗೆ.

**ಓದಲಾಗಿದೆ:** ಸಹಕಾರ ಸಂಘಗಳ ನಿಬಂಧಕರು, ಬೆಂಗಳೂರು ಇವರ ಪತ್ರ ಸಂಖ್ಯೆ: ಸಿಆರ್‌ಡಿ:ಕೆಆರ್‌ಎಫ್-1/75/2005-06, ದಿನಾಂಕ: 15.02.2006.

**ಪ್ರಸ್ತಾವನೆ:**

ತುಮಕೂರು ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕ್ ನಿ., ಇದರ 2004-05ನೇ ಸಾಲಿನ ವಾರ್ಷಿಕ ಮಹಾ ಸಭೆಯನ್ನು ದಿನಾಂಕ: 31.03.2006 ರೊಳಗೆ ನಡೆಸಲು ಸಹಕಾರ ಸಂಘಗಳ ಜಂಟಿ ನಿಬಂಧಕರು, ಬೆಂಗಳೂರು ಇವರ ಆದೇಶ ಸಂಖ್ಯೆ: ಜೆಆರ್‌ಬಿ/ಜೆಬಿಎಂ/ಅನುಮತಿ/82/05-06, ದಿನಾಂಕ: 02.09.2005 ರಲ್ಲಿ ಕಾಯ್ದೆ ಕಲಂ 27(1) ರಡಿ ಅನುಮತಿ ನೀಡಿದ್ದು, ಈ ಬಗ್ಗೆ ಆಡಳಿತ ಮಂಡಳಿಯಲ್ಲಿ ಚರ್ಚಿಸಿ, ಬ್ಯಾಂಕಿನ 50ನೇ ವರ್ಷದ ಸುವರ್ಣ ಮಹೋತ್ಸವವನ್ನು ಆಚರಿಸಬೇಕಾಗಿದ್ದು ಹಾಗೂ ಬ್ಯಾಂಕಿನ ಸಾಲ ವಸೂಲಾತಿ ಕಾರ್ಯದಲ್ಲಿ ಬ್ಯಾಂಕಿನ ಸಿಬ್ಬಂದಿ ನಿರತರಾಗಿರುವುದರಿಂದ ಮತ್ತು ಬ್ಯಾಂಕಿನ ಕಟ್ಟಡದ ನವೀಕರಣ ಕಾರ್ಯ ನಡೆಸಬೇಕಾಗಿರುವುದರಿಂದ 2004-05ನೇ ಸಾಲಿನ ವಾರ್ಷಿಕ ಮಹಾಸಭೆಯನ್ನು ಬ್ಯಾಂಕಿನ ಸುವರ್ಣ ಮಹೋತ್ಸವದೊಂದಿಗೆ ಏಕಕಾಲದಲ್ಲಿ ಆಚರಿಸಲು ಅನುವಾಗುವಂತೆ ದಿನಾಂಕ: 30.09.2006ರ ವರೆಗೆ ಅವಧಿ ವಿಸ್ತರಣೆ ಕೋರಿ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 121 ರನ್ವಯ ಪ್ರಕರಣ 27(1)ಕ್ಕೆ ವಿನಾಯಿತಿ ನೀಡಿ ಅನುಮತಿಯನ್ನು ನೀಡುವಂತೆ ಸಹಕಾರ ಸಂಘಗಳ ನಿಬಂಧಕರು ಶಿಫಾರಸ್ಸು ಮಾಡಿದ್ದಾರೆ.

ಸದರಿ ಪ್ರಸ್ತಾವೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಒ 43 ಸಿಎಲ್‌ಎಮ್ 2006, ಬೆಂಗಳೂರು, ದಿನಾಂಕ: 20ನೇ ಮಾರ್ಚ್ 2006**

ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 121 ರಡಿಯಲ್ಲಿ ಪ್ರದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ, ಸರ್ಕಾರವು ತುಮಕೂರು ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕ್ ನಿ., ಇದರ 2004-05ನೇ ಸಾಲಿನ ವಾರ್ಷಿಕ ಮಹಾ ಸಭೆಯನ್ನು ನಡೆಸಲು ದಿನಾಂಕ: 30.09.2006ರ ವರೆಗೆ ಕಾಲಾವಕಾಶ ನೀಡಲು ಅನುವಾಗುವಂತೆ ತುಮಕೂರು ಡಿ.ಸಿ.ಸಿ. ಬ್ಯಾಂಕಿಗೆ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 27(1)ರ ಉಪಬಂಧಗಳು ಕೆಳಗಿನ ಮಾರ್ಪಾಟಿನೊಂದಿಗೆ ಅನ್ವಯವಾಗುತ್ತದೆಂದು ನಿರ್ದೇಶಿಸುತ್ತದೆ ಎಂದರೆ:

**27ರ ಪ್ರಕರಣದಲ್ಲಿ:**

27ನೇ ಪ್ರಕರಣ ಉಪ ಪ್ರಕರಣ (1)ರ ಪರಂತುಕದಲ್ಲಿನ "ಆರು ತಿಂಗಳು" ಎಂಬ ಪದಗಳಿಗೆ ಬದಲಾಗಿ "ಹನ್ನೆರಡು ತಿಂಗಳು" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

**ಸೂಚನೆ:** ಪ್ರಕರಣ 27(1)ಕ್ಕೆ ಮಾಡಿದ ಈ ಮಾರ್ಪಾಡು ದಿನಾಂಕ: 30.09.2006ರ ವರೆಗೆ ಜಾರಿಯಲ್ಲಿರತಕ್ಕದ್ದು. ಈ ಅವಧಿ ಮುಗಿದ ನಂತರ ಈ ಆದೇಶದ ಮಾರ್ಪಾಡಿಗೆ ಮೊದಲು ಜಾರಿಯಲ್ಲಿದ್ದಂತೆ ಸದರಿ 27(1)ಕ್ಕೆ ಪ್ರಕರಣದ ಉಪಬಂಧಗಳು ಪುನಃ ಜಾರಿಗೆ ಬರತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎಸ್. ಹುಚ್ಚಾಚಾರಿ**

ಪಿ.ಆರ್. 779 ವಿಶೇಷ ಕರ್ತವ್ಯಾಧಿಕಾರಿ, ಸಹಕಾರ ಇಲಾಖೆ.

**ವಿಷಯ:** ಕಟಕೋಳ ಸಹಕಾರಿ ಬ್ಯಾಂಕ್ (ನಿ) ಇದರ 2004-05ನೇ ಸಾಲಿನ ವಾರ್ಷಿಕ ಮಹಾ ಸಭೆಯನ್ನು ನಡೆಸಲು ಅವಧಿ ವಿಸ್ತರಣೆ ಬಗ್ಗೆ.

**ಓದಲಾಗಿದೆ:** ಮಾನ್ಯ ಶಾಸಕರು ಯಾದವಾಡರವರ ಟಿಪ್ಪಣಿ ಸಂಖ್ಯೆ; ಸಿಎಮ್/669/ಎಮ್‌ಎಲ್‌ಎ(2)/06, ದಿನಾಂಕ: 29.03.2006.

**ಪ್ರಸ್ತಾವನೆ:**

ಮೇಲೆ ಓದಲಾದ ಪತ್ರದಲ್ಲಿ ಕಟಕೋಳ ಸಹಕಾರಿ ಬ್ಯಾಂಕ್ (ನಿ) ಇದರ 2004-05ನೇ ಸಾಲಿನ ವಾರ್ಷಿಕ ಮಹಾಸಭೆಯನ್ನು ದಿನಾಂಕ: 31.03.2006 ರೊಳಗೆ ನಡೆಸಬೇಕಾಗಿದ್ದು ಬ್ಯಾಂಕಿನ ಆರ್ಥಿಕ ಪರಿಸ್ಥಿತಿ ಉತ್ತಮವಾಗಿಲ್ಲದೆ ಇರುವುದರಿಂದ ಹಾಗೂ ಬ್ಯಾಂಕಿನ 2003-04ನೇ ಸಾಲಿನ

ಲೆಕ್ಕಪರಿಶೋಧನೆಯು ಕೂಡ ಅಂತಿಮವಾಗಿರುವುದಿಲ್ಲವಾದ್ದರಿಂದ ಹಾಗೂ ಬ್ಯಾಂಕು ಆರ್ಥಿಕ ತೊಂದರೆಯನ್ನು ಎದುರಿಸುತ್ತಿರುವುದರಿಂದ ಮತ್ತು ಇನ್ನೂ ಹಲವಾರು ತೊಂದರೆಗಳನ್ನು ಎದುರಿಸುತ್ತಿರುವುದರಿಂದ 2004-05ನೇ ಸಾಲಿನ ವಾರ್ಷಿಕ ಮಹಾ ಸಭೆಯನ್ನು ಸೆಪ್ಟೆಂಬರ್ 2006ರ ವರೆಗೆ ಮುಂದೂಡುವಂತೆ ದಿನಾಂಕ: 19.01.2006 ರಂದು ಜರುಗಿದ ಬ್ಯಾಂಕಿನ ಆಡಳಿತ ಮಂಡಳಿ ಸಭೆಯಲ್ಲಿ ತೀರ್ಮಾನಿಸಿರುವುದಾಗಿ ಮಾನ್ಯ ಶಾಸಕರು ತಮ್ಮ ಮನವಿಯಲ್ಲಿ ತಿಳಿಸುತ್ತಾ ಈ ಸಂಬಂಧ ಬ್ಯಾಂಕಿನ 2004-05ನೇ ಸಾಲಿನ ವಾರ್ಷಿಕ ಮಹಾಸಭೆಯನ್ನು ನಡೆಸಲು ಸೆಪ್ಟೆಂಬರ್ 2006ರ ವರೆಗೆ ಕಾಲಾವಕಾಶ ನೀಡಬೇಕೆಂದು ಕೋರಿರುತ್ತಾರೆ.

ಸದರಿ ಪ್ರಸ್ತಾವೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಒ 80 ಸಿಎಲ್‌ಎಮ್ 2006, ಬೆಂಗಳೂರು, ದಿನಾಂಕ: 17ನೇ ಏಪ್ರಿಲ್ 2006**

ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 121 ರಡಿಯಲ್ಲಿ ಪ್ರದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ, ಸರ್ಕಾರವು ಕಟಕೋಳ ಸಹಕಾರಿ ಬ್ಯಾಂಕ್ (ನಿ) ಇದರ 2004-05ನೇ ಸಾಲಿನ ವಾರ್ಷಿಕ ಮಹಾ ಸಭೆಯನ್ನು ನಡೆಸಲು ದಿನಾಂಕ: 30.06.2006ರ ವರೆಗೆ ಕಾಲಾವಕಾಶ ನೀಡಲು ಅನುವಾಗುವಂತೆ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 27(1)ರ ಉಪಬಂಧಗಳು ಕೆಳಗಿನ ಮಾರ್ಪಾಟಿನೊಂದಿಗೆ ಅನ್ವಯವಾಗುತ್ತದೆಂದು ನಿರ್ದೇಶಿಸುತ್ತದೆ ಎಂದರೆ:

**27ರ ಪ್ರಕರಣದಲ್ಲಿ:**

27ನೇ ಪ್ರಕರಣ ಉಪ ಪ್ರಕರಣ (1)ರ ಪರಂತುಕದಲ್ಲಿನ "ಆರು ತಿಂಗಳು" ಎಂಬ ಪದಗಳಿಗೆ ಬದಲಾಗಿ "ಒಂಬತ್ತು ತಿಂಗಳು" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

**ಸೂಚನೆ:** ಪ್ರಕರಣ 27(1)ಕ್ಕೆ ಮಾಡಿದ ಈ ಮಾರ್ಪಾಡು ದಿನಾಂಕ: 30.06.2006ರ ವರೆಗೆ ಜಾರಿಯಲ್ಲಿರತಕ್ಕದ್ದು. ಈ ಅವಧಿ ಮುಗಿದ ನಂತರ ಈ ಆದೇಶದ ಮಾರ್ಪಾಡಿಗೆ ಮೊದಲು ಜಾರಿಯಲ್ಲಿದ್ದಂತೆ ಸದರಿ 27(1)ಕ್ಕೆ ಪ್ರಕರಣದ ಉಪಬಂಧಗಳು ಪುನಃ ಜಾರಿಗೆ ಬರತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎಸ್. ಹುಚ್ಚಾಚಾರಿ**

ಪಿ.ಆರ್. 781 ವಿಶೇಷ ಕರ್ತವ್ಯಾಧಿಕಾರಿ, ಸಹಕಾರ ಇಲಾಖೆ.

**ಒಳಾಡಳಿತ ಸಚಿವಾಲಯ**

**ವಿಷಯ:** ಶ್ರೀ ಸಿ. ಕೃಷ್ಣಯ್ಯ, ಮಾಜಿ ಹೆಚ್‌ಸಿ-2485, ಡಿ.ಜೆ. ಹಳ್ಳಿ ಪೊಲೀಸ್ ಠಾಣೆ, ಬೆಂಗಳೂರು ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಬಗ್ಗೆ.

**ಓದಲಾಗಿದೆ:**
1) ಶಿಸ್ತು ಪ್ರಾಧಿಕಾರಿ ಹಾಗೂ ಉಪ ಪೊಲೀಸ್ ಆಯುಕ್ತರು, ಪೂರ್ವ ವಿಭಾಗ, ಬೆಂಗಳೂರು ಇವರ ಆದೇಶ ಸಂಖ್ಯೆ: ಡಿಇ/ಆರ್-6/05/2003, ದಿನಾಂಕ: 26.04.2004.
2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಜಂಟಿ ಪೊಲೀಸ್ ಆಯುಕ್ತರು, ಆಡಳಿತ ಮತ್ತು ಸಿಎಆರ್, ಬೆಂಗಳೂರು ಇವರ ಆದೇಶ ಸಂಖ್ಯೆ: 16/ಅಪೀಲು/2004, ದಿನಾಂಕ: 28.09.2004.
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 27.10.2004.
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು/2/69/2004, ದಿನಾಂಕ: 16.05.2005.
5) ಕರ್ನಾಟಕ ಲೋಕಸೇವಾ ಆಯೋಗದ ಪತ್ರ ಸಂಖ್ಯೆ: ಪಿಎಸ್‌ಸಿ/204/ಸಿಎನ್‌ಎಸ್/2005, ದಿನಾಂಕ: 21.03.2006.

**ಪ್ರಸ್ತಾವನೆ:**

ಶ್ರೀ ಕೃಷ್ಣಯ್ಯ, ಮಾಜಿ ಹೆಚ್‌ಸಿ-2485, ಡಿ.ಜೆ.ಹಳ್ಳಿ ಪೊಲೀಸ್ ಠಾಣೆ, ಬೆಂಗಳೂರು ಇವರ ವಿರುದ್ಧ (ಇ.ಮು.ಅ.ಕ.) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965ರ ನಿಯಮ 6 ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷಾರೋಪಣೆ:**

"ನೀವು ದಿನಾಂಕ: 28.11.2002 ರಿಂದ 30.04.2003ರ ವರೆಗೆ ಠಾಣೆಗೆ ಯಾವುದೇ ಮುನ್ಸೂಚನೆ ನೀಡದೇ ಮೇಲಾಧಿಕಾರಿಗಳಿಂದ ರಜೆ ಮಂಜೂರು ಮಾಡಿಸಿಕೊಳ್ಳದೇ ಹಾಗೂ ಎಂ.ಹೆಚ್.ಎಸ್. ಪುಸ್ತಕವನ್ನು ಸಹ ತೆಗೆದುಕೊಳ್ಳದೇ ಕೆಲಸಕ್ಕೆ ಅನಧಿಕೃತವಾಗಿ ಗೈರುಹಾಜರಿ ಆಗಿರುತ್ತೀರಿ".

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಉಪ ಪೊಲೀಸ್ ಆಯುಕ್ತರು, ಪೂರ್ವ ವಿಭಾಗ, ಬೆಂಗಳೂರು ಇವರ ಮೇಲೆ ಕ್ರಮ ಸಂಖ್ಯೆ: (1) ರಲ್ಲಿ ಓದಲಾದ ದಿನಾಂಕ: 26.04.2004ರ ಆದೇಶದಲ್ಲಿ ಅರ್ಜಿದಾರರನ್ನು ಸೇವೆಯಿಂದ ವಜಾ ಮಾಡಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಜಂಟಿ ಪೊಲೀಸ್ ಆಯುಕ್ತರು, ಬೆಂಗಳೂರು ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಯಾವುದೇ ಅಂಶಗಳಿಲ್ಲವೆಂದು ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ: (2) ರಲ್ಲಿ ಓದಲಾದ ದಿನಾಂಕ: 28.09.2004ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಅರ್ಜಿದಾರರನ್ನು ಸೇವೆಗೆ ಪುನರ್ ನೇಮಕ ಮಾಡುವುದು, ಕರ್ತವ್ಯಕ್ಕೆ ಗೈರುಹಾಜರಾದ ಅವಧಿ ದಿನಾಂಕ: 29.11.2002 ರಿಂದ 25.04.2004ರ ವರೆಗೆ 'ಸಂಬಳ ರಹಿತ ರಜೆ' ಎಂದು ಪರಿಗಣಿಸುವುದು, ಶಿಸ್ತು ಪ್ರಾಧಿಕಾರಿ ವಜಾ ಮಾಡಿದ ಆದೇಶ ದಿನಾಂಕ: 26.04.2004 ರಿಂದ ಸೇವೆಗೆ ಪುನರ್ ಹಾಜರಾಗುವ ದಿನಾಂಕದವರೆಗಿನ ಅವಧಿಯನ್ನು ಸಹ 'ಸಂಬಳ ರಹಿತ ರಜೆ' ಎಂದು ಪರಿಗಣಿಸುವುದು, ಅರ್ಜಿದಾರರ ಮುಂದಿನ ಎರಡು ವಾರ್ಷಿಕ ವೇತನಬಡ್ತಿಗಳನ್ನು ಸಂಚಿತ ಪರಿಣಾಮ ಬೀರುವಂತೆ

ತಡೆಹಿಡಿಯುವುದು ಸರ್ಕಾರ ಮಾರ್ಪಾಡಿಸಲು ಉದ್ದೇಶಿಸಿ, ಕರ್ನಾಟಕ ಲೋಕಸೇವಾ ಆಯೋಗದ ಅನುಮೋದನೆ ಪಡೆಯಲಾಗಿತ್ತು. ಕರ್ನಾಟಕ ಲೋಕಸೇವಾ ಆಯೋಗವು ದಿನಾಂಕ: 21.03.2006ರ ತನ್ನ ಪತ್ರದಲ್ಲಿ ಸರ್ಕಾರ ಉದ್ದೇಶಿಸಿದ ಮಾರ್ಪಾಡಿಗೆ ಸಹಮತಿ ನೀಡಿದೆ.

**ಸರ್ಕಾರಿ ಆದೇಶ ಸಂಖ್ಯೆ: ಒಇ 228 ಪೊಸಿಅ 2004, ಬೆಂಗಳೂರು, ದಿನಾಂಕ: 15ನೇ ಏಪ್ರಿಲ್ 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ದಿನಾಂಕ: 26.04.2004ರ ಶಿಸ್ತು ಪ್ರಾಧಿಕಾರಿಯ ಆದೇಶವನ್ನು ರದ್ದುಪಡಿಸಿ, ಶ್ರೀ ಸಿ.ಕೃಷ್ಣಯ್ಯ, ಮಾಜಿ ಹೆಚ್.ಸಿ.2485, ಡಿ.ಜೆ.ಹಳ್ಳಿ ಪೊಲೀಸ್ ಠಾಣೆ, ಬೆಂಗಳೂರು ಇವರು ಸರ್ಕಾರಕ್ಕೆ ಸಲ್ಲಿಸಿದ್ದ ದಿನಾಂಕ: 27.10.2004ರ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಪುರಸ್ಕರಿಸಿ ಕೆಳಕಂಡಂತೆ ಆದೇಶಿಸಿದೆ.

1) ಅರ್ಜಿದಾರರನ್ನು ಸೇವೆಗೆ ಪುನರ್ ನೇಮಕ ಮಾಡಲಾಗಿದೆ.
2) ಕರ್ತವ್ಯಕ್ಕೆ ಗೈರುಹಾಜರಾದ ಅವಧಿ ದಿನಾಂಕ: 29.11.2002 ರಿಂದ 25.04.2004ರ ವರೆಗೆ 'ಸಂಬಳ ರಹಿತ ರಜೆ' ಎಂದು ಪರಿಗಣಿಸಲಾಗಿದೆ.
3) ಶಿಸ್ತು ಪ್ರಾಧಿಕಾರಿ ವಜಾ ಮಾಡಿದ ಆದೇಶ ದಿನಾಂಕ: 26.04.2004 ರಿಂದ ಸೇವೆಗೆ ಪುನರ್ ಹಾಜರಾಗುವ ದಿನಾಂಕದವರೆಗಿನ ಅವಧಿಯನ್ನು ಸಹ 'ಸಂಬಳ ರಹಿತ ರಜೆ' ಎಂದು ಪರಿಗಣಿಸಲಾಗಿದೆ.
4) ಅರ್ಜಿದಾರರ ಮುಂದಿನ ಎರಡು ವಾರ್ಷಿಕ ವೇತನಬಡ್ತಿಗಳನ್ನು ಸಂಚಿತ ಪರಿಣಾಮ ಬೀರುವಂತೆ ತಡೆಹಿಡಿಯಲಾಗಿದೆ.

ಈ ಆದೇಶವನ್ನು ಕರ್ನಾಟಕ ಲೋಕಸೇವಾ ಆಯೋಗವು ದಿನಾಂಕ: 21.03.2006ರ ಪತ್ರದಲ್ಲಿನ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸಿ. ಬಸವರಾಜು**

ಪಿ.ಆರ್. 687 ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು).

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ:** ಡಾ: ವಿನಿತಾ ಉದೋಶಿ, ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿ, ಇವರನ್ನು ಸೇವೆಯಿಂದ ವಜಾಗೊಳಿಸುವ ಬಗ್ಗೆ.

**ಓದಲಾಗಿದೆ:** ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು, ಇವರ ಪತ್ರ ಸಂಖ್ಯೆ: ಡಿಪಿಜಿ:ಜಿವಿ:ಬೆ:13: 05-06, ದಿನಾಂಕ: 04.02.2006.

**ಪ್ರಸ್ತಾವನೆ:**

ಮೇಲೆ ಓದಲಾದ ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು, ಇವರ ಪ್ರಸ್ತಾವನೆಯಲ್ಲಿ ಡಾ: ವಿನಿತಾ ಉದೋಶಿ, ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿ, ನಗರ ಆರೋಗ್ಯ ಕೇಂದ್ರ, ಚೌಗುಲೆವಾಡಿ, ಬೆಳಗಾಂ ಜಿಲ್ಲೆ, ಇವರು ದಿನಾಂಕ: 17.09.2002 ರಂದು ಸರ್ಕಾರಿ ಸೇವೆಗೆ ಸೇರಿದ್ದು ದಿನಾಂಕ: 16.6.2005 ರಿಂದ ರಜೆ ಅರ್ಜಿ ಸಲ್ಲಿಸಿ ಕಾರ್ಯಭಾರ ವರ್ಗಾವಣೆ ಪತ್ರ ಸಲ್ಲಿಸಿರುವುದಿಲ್ಲ ಹಾಗೂ ಈ ಬಗ್ಗೆ ಕಾರಣ ಕೇಳುವ ನೋಟೀಸಿಗೆ ಹೇಳಿಕೆ ಸಲ್ಲಿಸಿರುವುದಿಲ್ಲ. ಸದರಿ ವೈದ್ಯರು ದಿನಾಂಕ: 10.06.2005 ರಂದು ಜವಾಹರಲಾಲ್ ನೆಹರು ವೈದ್ಯಕೀಯ ಮಹಾವಿದ್ಯಾಲಯ, ಬೆಳಗಾಂ ಇಲ್ಲಿ ಸ್ನಾತಕೋತ್ತರ ವ್ಯಾಸಂಗಕ್ಕೆ ಪ್ರವೇಶ ಪಡೆದಿರುವುದಾಗಿ ಪ್ರಾಂಶುಪಾಲರು ವರದಿ ಮಾಡಿರುತ್ತಾರೆ ಎಂದು ತಿಳಿಸುತ್ತಾ ಸದರಿ ವೈದ್ಯರು ಸ್ನಾತಕೋತ್ತರ ವ್ಯಾಸಂಗಕ್ಕೆ ತೆರಳಲು ಸರ್ಕಾರದ ಪೂರ್ವಾನುಮತಿ ಪಡೆಯದೆ, ಖಾಯಂ ಪೂರ್ವ ಸೇವಾವಧಿಯಲ್ಲಿಯೇ ಅನಧಿಕೃತ ಗೈರುಹಾಜರಿಯಾಗಿ ಕರ್ತವ್ಯ ಲೋಪ ಎಸಗಿರುವುದರಿಂದ ಕರ್ನಾಟಕ ನಾಗರೀಕ ಸೇವಾ (ಪ್ರೊಬೇಷನ್) ನಿಯಮಾವಳಿ 1977ರ ಉಪ ನಿಯಮ 6ರ ಪ್ರಕಾರ ಸರ್ಕಾರಿ ಸೇವೆಯಿಂದ ವಿಮೋಚನೆಗೊಳಿಸಲು ಕೋರಿರುತ್ತಾರೆ. ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು ಇವರ ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಆಕುಕ 187 ಹೆಚ್ಎಸ್ಹೆಚ್ 2006, ಬೆಂಗಳೂರು, ದಿನಾಂಕ: 3ನೇ ಮೇ 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಡಾ: ವಿನಿತಾ ಉದೋಶಿ, ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿ, ನಗರ ಆರೋಗ್ಯ ಕೇಂದ್ರ, ಚೌಗುಲೆವಾಡಿ, ಬೆಳಗಾಂ ಜಿಲ್ಲೆ, ಇವರು ದಿನಾಂಕ: 16.06.2005 ರಿಂದ ಖಾಯಂ ಪೂರ್ವ ಸೇವಾವಧಿಯಲ್ಲಿ ಕರ್ತವ್ಯಕ್ಕೆ ಅನಧಿಕೃತ ಗೈರುಹಾಜರಾಗಿ ಕರ್ತವ್ಯಚ್ಯುತಿ ಎಸಗಿರುವುದರಿಂದ ಸದರಿಯವರನ್ನು ದಿನಾಂಕ: 16.06.2005 ರಿಂದ ಜಾರಿಗೆ ಬರುವಂತೆ ಕರ್ನಾಟಕ ನಾಗರೀಕ ಸೇವಾ (ಖಾಯಂಪೂರ್ವ) ನಿಯಮಾವಳಿ 1977ರ ನಿಯಮ 6ರ ಅಡಿಯಲ್ಲಿ ಸರ್ಕಾರಿ ಸೇವೆಯಿಂದ ವಿಮೋಚನೆಗೊಳಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ.ಎನ್. ನಾರಾಯಣ ಗೌಡ**

ಪಿ.ಆರ್. 788 ಸರ್ಕಾರದ ಅಧೀನ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ಸೇವೆಗಳು-1).

## ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಸಚಿವಾಲಯ

**ವಿಷಯ:** ರಾಜ್ಯದ ರಾಯಚೂರು ಜಿಲ್ಲೆಯಲ್ಲಿ ಬೇಸಿಗೆ ಬೆಳೆಯಾಗಿ ಬೆಳೆದ ಭತ್ತವನ್ನು ಬೆಂಬಲ ಬೆಲೆ ಯೋಜನೆಯಡಿ ಖರೀದಿ ಕೇಂದ್ರಗಳನ್ನು ಪ್ರಾರಂಭಿಸುವ ಕುರಿತು.

**ಓದಲಾಗಿದೆ:** 1) ಕೇಂದ್ರ ಸರ್ಕಾರದ ಪತ್ರ ಸಂಖ್ಯೆ: 160(1)/2005.PY.I ದಿನಾಂಕ: 4.2.2005.
2) ರಾಯಚೂರು ಜಿಲ್ಲಾಧಿಕಾರಿಗಳ ಪತ್ರ ಸಂಖ್ಯೆ: RBR/PS.MSP/05-06, ದಿನಾಂಕ: 10.05.2006.

**ಪ್ರಸ್ತಾವನೆ:**

2005-06ನೇ ಸಾಲಿನ ಖಾರೀಫ್ ಋತುವಿನಲ್ಲಿ ಒರಟು ಧಾನ್ಯಗಳನ್ನು ಸಂಗ್ರಹಿಸಲು ಕೇಂದ್ರ ಸರ್ಕಾರವು ವಿವಿಧ ಬೆಳೆಗಳಿಗೆ ಬೆಂಬಲ ಬೆಲೆ ಯೋಜನೆಯಡಿ ದರಗಳನ್ನು ಉಲ್ಲೇಖಿತ (1)ರ ಪತ್ರದಲ್ಲಿ ನಿಗದಿಪಡಿಸಲಾಗಿದೆ. ಅದರಂತೆ, ಸಚಿವ ಸಂಪುಟದ ಉಪ ಸಮಿತಿಯ ಶಿಫಾರಸ್ಸಿನಂತೆ ರಾಜ್ಯದಲ್ಲಿ ಭತ್ತ, ಮೆಕ್ಕೆಜೋಳ ಹಾಗೂ ರಾಗಿಯನ್ನು ಖರೀದಿಸಲು ಜಿಲ್ಲಾ ಟಾಸ್ಕ್ ಫೋರ್ಸ್ ಸಮಿತಿಯವರು ಆಯ್ಕೆ ಮಾಡಿದ ಸ್ಥಳಗಳಲ್ಲಿ ಖರೀದಿ ಕೇಂದ್ರಗಳನ್ನು ಪ್ರಾರಂಭಿಸಿದ್ದು, ಅವುಗಳ ಅವಧಿಯು ಈಗ ಮುಕ್ತಾಯಗೊಂಡಿರುತ್ತದೆ.

ರಾಜ್ಯದ ರಾಯಚೂರು ಜಿಲ್ಲೆಯಲ್ಲಿ ನೀರಾವರಿ ಸೌಲಭ್ಯವನ್ನು ಬಳಸಿಕೊಂಡು ಅಲ್ಲಿನ ರೈತರು ಬೇಸಿಗೆ ಬೆಳೆಯಾಗಿ ಭತ್ತವನ್ನು ಬೆಳೆದು, ಹೆಚ್ಚು ಇಳುವರಿಯನ್ನು ಪಡೆದಿರುತ್ತಾರೆ. ಈಗ ಭತ್ತದ ಬೆಲೆಯು ಕೇಂದ್ರ ಸರ್ಕಾರವು ನಿಗದಿಪಡಿಸಿದ ಬೆಂಬಲ ಬೆಲೆಗಿಂತ ಅತಿ ಕಡಿಮೆ ದರದಲ್ಲಿ ಮಾರಾಟವಾಗುತ್ತಿರುವುದರಿಂದ, ರೈತಾಪಿ ವರ್ಗವು ಆರ್ಥಿಕವಾಗಿ ಸಂಕಷ್ಟಕ್ಕೀಡಾಗಿದ್ದು, ರೈತರ ಸಹಾಯಕ್ಕೆ ಬರುವಂತೆ ಜನಪ್ರತಿನಿಧಿಗಳಿಂದ ಒತ್ತಾಯದ ಮನವಿಗಳು ಬರುತ್ತಿರುವ ಹಿನ್ನಲೆಯಲ್ಲಿ ಅಲ್ಲಿನ ಜಿಲ್ಲಾಧಿಕಾರಿಗಳು ಮೇಲೆ ಓದಲಾದ (2)ರ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ. ಸರ್ಕಾರವು ಈ ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಿದೆ:

**ಸರ್ಕಾರಿ ಆದೇಶ ಸಂಖ್ಯೆ: ಆನಾಸ 30 ಆರ್‌ಪಿಆರ್ 2005 (ಭಾಗ-1), ಬೆಂಗಳೂರು, ದಿನಾಂಕ: 18ನೇ ಮೇ 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ರಾಯಚೂರು ಜಿಲ್ಲೆಯ ಮಾನ್ವಿ ಹಾಗೂ ಸಿಂಧನೂರು ತಾಲ್ಲೂಕಿನ ಎರಡು ಸ್ಥಳಗಳಲ್ಲಿ ಬೇಸಿಗೆ ಬೆಳೆಯಾಗಿ ಬೆಳೆದ ಸಾಮಾನ್ಯ ದರ್ಜೆ ಭತ್ತವನ್ನು ರೈತರಿಂದ ಮಾತ್ರ ಪ್ರತಿ ಕ್ವಿಂಟಾಲ್‌ಗೆ ರೂ.600-00 ರಂತೆ ದಿನಾಂಕ: 24.05.2006 ರವರೆಗೆ ಖರೀದಿಸಲು ಕರ್ನಾಟಕ ಆಹಾರ ಮತ್ತು ನಾಗರೀಕ ಸರಬರಾಜು ನಿಗಮ ನಿಯಮಿತಕ್ಕೆ ಅನುಮತಿ ನೀಡಿದೆ. ಈ ಬೆಲೆಯು ರಾಯಚೂರು ಜಿಲ್ಲೆಯ ಮಾನ್ವಿ ಮತ್ತು ಸಿಂಧನೂರು ತಾಲ್ಲೂಕಿನಲ್ಲಿ ಖರೀದಿಸುವ ಭತ್ತಕ್ಕೆ ಈ ಅವಧಿಗೆ ಮಾತ್ರ ಅನ್ವಯಿಸುತ್ತದೆ. ಸದರಿ ನಿಗಮವು ಖರೀದಿ ಕೇಂದ್ರಗಳನ್ನು ತಕ್ಷಣವೇ ಜಿಲ್ಲಾಡಳಿತವನ್ನು ಸಂಪರ್ಕಿಸಿ ಪ್ರಾರಂಭಿಸುವಂತೆ ನಿರ್ದೇಶನ ನೀಡಿದೆ. ಭತ್ತ ಖರೀದಿ ಪ್ರಕ್ರಿಯೆಯಲ್ಲಿ ಕೇಂದ್ರ ಸರ್ಕಾರವು ನಿಗದಿಪಡಿಸಿದ ಗುಣಮಟ್ಟವನ್ನು (FAQ Standard), ಕಡ್ಡಾಯವಾಗಿ ಕಾಯ್ದುಕೊಳ್ಳುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 268 ವೆಚ್ಚ-9/06, ದಿನಾಂಕ: 16.5.2006 ರಲ್ಲಿನ ಸಹಮತಿಯನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎ.ಎನ್. ಶಾಂತಕುಮಾರಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ.

ಪಿ.ಆರ್. 789

**ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ**

**ವಿಷಯ:** ಸಹಕಾರ ಇಲಾಖೆಯ ವಿಶೇಷ ಕರ್ತವ್ಯಾಧಿಕಾರಿ ಹುದ್ದೆಯನ್ನು ಉನ್ನತೀಕರಿಸಿ ಮುಂದುವರೆಸುವ ಬಗ್ಗೆ.

**ಓದಲಾಗಿದೆ:** ಅನಧಿಕೃತ ಟಿಪ್ಪಣಿ ಸಂಖ್ಯೆ: ಸಇ 58 ಎಸೆಸೇ 2005, ದಿನಾಂಕ: 17.11.2005.

**ಪ್ರಸ್ತಾವನೆ:**

ಮೇಲೆ ಓದಲಾಗಿರುವ ಅನಧಿಕೃತ ಟಿಪ್ಪಣಿಯಲ್ಲಿ ಸರ್ಕಾರಿ ಆದೇಶ ಸಂಖ್ಯೆ: ಡಿಪಿಎಆರ್ 188 ಎಸ್‌ಜಿಬಿ 79, ದಿನಾಂಕ: 30.5.1979 ರಲ್ಲಿ ಸೃಜಿಸಲಾದ ವಿಶೇಷಾಧಿಕಾರಿ ಹುದ್ದೆಯ ಕಾಲಾವಧಿಯು ದಿನಾಂಕ: 31.3.2005 ರಂದು ಕೊನೆಗೊಂಡಿರುವುದರಿಂದ ಆ ಹುದ್ದೆಯನ್ನು ದಿನಾಂಕ: 01.04.2005 ರಿಂದ ಮುಂದುವರಿಸುವಂತೆ ಹಾಗೂ ಆ ಹುದ್ದೆಯನ್ನು ವಿಶೇಷ ಕರ್ತವ್ಯಾಧಿಕಾರಿ ಹಾಗೂ ಪದನಿಮಿತ್ತ ಜಂಟಿ ಕಾರ್ಯದರ್ಶಿ ಹುದ್ದೆಗೆ ಉನ್ನತೀಕರಿಸಿ ಶ್ರೀ ಆರ್.ಎಸ್. ಹುಚ್ಚಾಚಾರಿ, ಸಹಕಾರ ಸಂಘಗಳ ಅಪರ ನಿಬಂಧಕರು ಅವರನ್ನು ಸದರಿ ಹುದ್ದೆಯಲ್ಲಿ ಮುಂದುವರೆಸುವಂತೆ ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 79 ಸಸಿವಿ 2006, ಬೆಂಗಳೂರು, ದಿನಾಂಕ: 10ನೇ ಮೇ 2006**

ಕರ್ನಾಟಕ ಸರ್ಕಾರ ಸಚಿವಾಲಯದ ಸಹಕಾರ ಇಲಾಖೆಯ ವಿಶೇಷಾಧಿಕಾರಿ ಹುದ್ದೆಯನ್ನು ದಿನಾಂಕ: 1.4.2005 ರಿಂದ ಒಂದು ವರ್ಷದ ಅವಧಿಗೆ ಮುಂದುವರೆಸಿದೆ. ಪ್ರಸ್ತುತ ಸದರಿ ಹುದ್ದೆಯಲ್ಲಿ ಕಾರ್ಯನಿರ್ವಹಿಸುತ್ತಿರುವ ಶ್ರೀ ಆರ್.ಎಸ್. ಹುಚ್ಚಾಚಾರಿ, ಸಹಕಾರ ಸಂಘಗಳ ಜಂಟಿ ನಿಬಂಧಕರು, ಸಹಕಾರ ಇಲಾಖೆ ಇವರಿಗೆ ರೂ.12800-16720ರ ವೇತನ ಶ್ರೇಣಿಯ ಸಹಕಾರ ಸಂಘಗಳ ಅಪರ ನಿಬಂಧಕರ ಹುದ್ದೆಗೆ ಮುಂಬಡ್ತಿ ಹೊಂದಿ ಕಾರ್ಯಭಾರ ವಹಿಸಿಕೊಂಡ ದಿನಾಂಕದಿಂದ ಜಾರಿಗೆ ಬರುವಂತೆ ವಿಶೇಷಾಧಿಕಾರಿ ಹುದ್ದೆಯನ್ನು ತಟಸ್ಥಗೊಳಿಸಿ, ಒಂದು ವರ್ಷದ ಅವಧಿಗೆ ತಾತ್ಕಾಲಿಕವಾಗಿ "ವಿಶೇಷ ಕರ್ತವ್ಯಾಧಿಕಾರಿ ಹಾಗೂ ಪದನಿಮಿತ್ತ ಜಂಟಿ ಕಾರ್ಯದರ್ಶಿ" ಹುದ್ದೆ ಎಂದು ಸೃಜಿಸಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯು ತನ್ನ ಟಿಪ್ಪಣಿ ಸಂಖ್ಯೆ: ಆಇ 234 ವೆಚ್ಚ-5/2006, ದಿನಾಂಕ: 20.3.2006ರ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಯು.ಪಿ. ಪ್ರಭು**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-2).

ಪಿ.ಆರ್. 790

**ಕಂದಾಯ ಸಚಿವಾಲಯ**

**ವಿಷಯ:** ಫೈಯಜುಲ್ ಉಲುಮ್ ಎಜುಕೇಷನ್ ಸೊಸೈಟಿ, ರೋಜಾ (ಕೆ), ಗುಲ್ಬರ್ಗಾ ಈ ಸಂಸ್ಥೆಗೆ ನೇಮಕ ಮಾಡಲಾಗಿರುವ ಆಡಳಿತಾಧಿಕಾರಿ ಅವಧಿಯನ್ನು ವಿಸ್ತರಿಸಿ ಆದೇಶಿಸುವ ಕುರಿತು.

**ಓದಲಾಗಿದೆ:**
1) ಸರ್ಕಾರದ ಆದೇಶ ಸಂಖ್ಯೆ: ಕಂಇ 31 ಮುನೊಸೊ 2001, ದಿನಾಂಕ: 27.02.2004.
2) ಆಡಳಿತಾಧಿಕಾರಿಗಳು, ಫೈಯಜುಲ್ ಉಲುಮ್ ಎಜುಕೇಷನ್ ಸೊಸೈಟಿ, ರೋಜಾ (ಕೆ), ಗುಲ್ಬರ್ಗಾ ರವರ ಪತ್ರ ಸಂಖ್ಯೆ: ಜಿಪಗು.ಸಿ.1. ಆಡಳಿತಾಧಿಕಾರಿ ಪ್ರಭಾರ 2005-06/2/2493, ದಿನಾಂಕ: 13.02.2006.

**ಪ್ರಸ್ತಾವನೆ:**

ಮೇಲೆ-1 ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಶ್ರೀ ಫೈಯಜುಲ್ ಉಲುಮ್ ಎಜುಕೇಷನ್ ಸೊಸೈಟಿ, ರೋಜಾ (ಕೆ), ಈ ಸಂಸ್ಥೆಯ ಅವ್ಯವಹಾರಗಳನ್ನು ಸರಿಪಡಿಸಲು ಹಾಗೂ ಸಂಸ್ಥೆಗೆ ಚುನಾವಣೆ ನಡೆಸಿ ಚುನಾಯಿತ ಆಡಳಿತ ಮಂಡಳಿಗೆ ಅಧಿಕಾರ ವಹಿಸಲು ಆಡಳಿತಾಧಿಕಾರಿಯನ್ನು

ನೇಮಕ ಮಾಡಲಾಗಿತ್ತು. ಆಡಳಿತಾಧಿಕಾರಿ ಅವಧಿಯನ್ನು ಕಾಲಕಾಲಕ್ಕೆ ವಿಸ್ತರಿಸಿಕೊಂಡು ಬರಲಾಗಿದೆ. ಮೇಲೆ ಓದಲಾದ (2) ರಲ್ಲಿ ಆಡಳಿತಾಧಿಕಾರಿಗಳು ಪ್ರಸ್ತಾವನೆ ಸಲ್ಲಿಸಿ ಸಂಸ್ಥೆಯ ಅವ್ಯವಹಾರಗಳನ್ನು ಸರಿಪಡಿಸಲು ಹೆಚ್ಚಿನ ಕಾಲಾವಕಾಶವನ್ನು ಕೋರಿದ್ದಾರೆ. ಆಡಳಿತಾಧಿಕಾರಿಗಳ ಪ್ರಸ್ತಾವನೆಯನ್ನು ಪರಿಶೀಲಿಸಿ ಸಂಸ್ಥೆಗೆ ನೇಮಕ ಮಾಡಿದ ಆಡಳಿತಾಧಿಕಾರಿ ಅವಧಿಯನ್ನು 6 ತಿಂಗಳ ಅವಧಿಗೆ ವಿಸ್ತರಿಸಲು ಸರ್ಕಾರವು ತೀರ್ಮಾನಿಸಿದೆ. ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 30 ಮುನೋಸೊ 2006, ಬೆಂಗಳೂರು, ದಿನಾಂಕ: 11ನೇ ಮೇ 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960ರ ಕಲಂ 27-ಎ ಪ್ರಕಾರ ಶ್ರೀ ಫೈಯಜುಲ್ ಉಲುಮ್ ಎಜುಕೇಷನ್ ಸೊಸೈಟಿ, ರೋಜಾ (ಕೆ), ಗುಲ್ಬರ್ಗಾ ಈ ಸಂಸ್ಥೆಗೆ ನೇಮಕ ಮಾಡಲಾಗಿರುವ ಆಡಳಿತಾಧಿಕಾರಿ ಅವಧಿಯನ್ನು ದಿನಾಂಕ: 27.02.2006 ರಿಂದ ಮುಂದಿನ 6 ತಿಂಗಳ ಅವಧಿಗೆ ಅಥವಾ ಸಂಸ್ಥೆಗೆ ಚುನಾವಣೆ ನಡೆಸಿ, ನೂತನ ಚುನಾಯಿತ ಆಡಳಿತ ಮಂಡಳಿಗೆ ಅಧಿಕಾರವನ್ನು ಹಸ್ತಾಂತರಿಸುವವರೆಗೆ ಅಥವಾ ಇವೆರಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ವಿಸ್ತರಿಸಿ ಆದೇಶಿಸಿದೆ.

ಆಡಳಿತಾಧಿಕಾರಿಯವರು ವಿಸ್ತರಣಾ ಅವಧಿಯೊಳಗಾಗಿ ಕಡ್ಡಾಯವಾಗಿ ಸಂಸ್ಥೆಗೆ ಚುನಾವಣೆ ನಡೆಸಿ, ಚುನಾಯಿತ ನೂತನ ಆಡಳಿತ ಮಂಡಳಿಗೆ ಅಧಿಕಾರವನ್ನು ಹಸ್ತಾಂತರಿಸುವಂತೆ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಶಿವಲಿಂಗ**

ಪಿ.ಆರ್. 791 ಪೀಠಾಧಿಕಾರಿ, ಕಂದಾಯ ಇಲಾಖೆ, (ನೋಂದಣಿ ಮತ್ತು ಮುದ್ರಾಂಕ).

**ವಿಷಯ:** ಕರ್ನಾಟಕ ಚಿತ್ರಕಲಾ ಪರಿಷತ್ತಿಗೆ ಆಡಳಿತಾಧಿಕಾರಿಗಳನ್ನು ನೇಮಿಸುವ ಕುರಿತು.

**ಓದಲಾಗಿದೆ:** 1) ಕರ್ನಾಟಕ ಚಿತ್ರಕಲಾ ಪರಿಷತ್ತಿನ ಶ್ರೀಮತಿ ಸರೋಜ ಕೆ.ಎಂ. ನಂಜಪ್ಪ ಹಾಗೂ ಶ್ರೀಮತಿ ಎಂ.ಜೆ. ಕಮಲಾಕ್ಷಿ ರವರ ಪತ್ರ ದಿನಾಂಕ: 02.05.2006.

2) ಕರ್ನಾಟಕ ಚಿತ್ರಕಲಾ ಪರಿಷತ್ತಿನ ಶ್ರೀ ಡಿ.ಕೆ. ಚೌಟರವರ ಪತ್ರ ಸಂಖ್ಯೆ: ಸಿಕೆಪಿ:37:ಇಸಿಎಫ್:2006-07, ದಿನಾಂಕ: 08.05.2006.

3) ಜಿಲ್ಲಾ ನೋಂದಣಾಧಿಕಾರಿಗಳು (ಸಂಘ ಮತ್ತು ಸಂಸ್ಥೆಗಳು), ಬೆಂಗಳೂರು ಇವರ ಪತ್ರ ದಿನಾಂಕ: 12.05.2006.

**ಪ್ರಸ್ತಾವನೆ:**

ಮೇಲೆ (1) ರಲ್ಲಿ ಓದಲಾದ ಪತ್ರದಲ್ಲಿ ಕರ್ನಾಟಕ ಚಿತ್ರಕಲಾ ಪರಿಷತ್ತಿನ ಕಾರ್ಯಕಾರಿ ಸಮಿತಿಯು ದಿನಾಂಕ: 29.04.2006 ರಂದು ನಡೆಸಿದ ಸಭೆಯಲ್ಲಿ ಠರಾವು ಮೂಲಕ ಶ್ರೀ ಬಿ.ಎಲ್. ಶಂಕರ್ ರವರನ್ನು ಕರ್ನಾಟಕ ಚಿತ್ರಕಲಾ ಪರಿಷತ್ ಅಧ್ಯಕ್ಷ ಸ್ಥಾನದಿಂದ ತೆಗೆದು ಹಾಕಿ ಅವರ ಸ್ಥಾನದಲ್ಲಿ ಶ್ರೀಮತಿ ಸರೋಜ ಕೆ. ಎಂ. ನಂಜಪ್ಪರವರನ್ನು ಸದರಿ ಪರಿಷತ್ತಿನ ಅಧ್ಯಕ್ಷರನ್ನಾಗಿ ನೇಮಿಸಲಾಗಿದೆ ಎಂದು ತಿಳಿಸಲಾಗಿದೆ. ಇದೇ ರೀತಿ ಶ್ರೀ ಡಿ.ಕೆ. ಚೌಟರವರನ್ನು ಜನರಲ್ ಸೆಕ್ರೆಟರಿ ಸ್ಥಾನದಿಂದ ತೆಗೆದು ಹಾಕಿ ಅವರ ಸ್ಥಾನದಲ್ಲಿ ಶ್ರೀಮತಿ ಕಮಲಾಕ್ಷಿರವರನ್ನು ಜನರಲ್ ಸೆಕ್ರೆಟರಿಯಾಗಿ ನೇಮಿಸಲಾಗಿದೆ ಎಂದೂ ಸಹ ಸದರಿ ಪತ್ರದಲ್ಲಿ ತಿಳಿಸಿದೆ.

ಮೇಲೆ (2) ರಲ್ಲಿ ಓದಲಾದ ಪತ್ರದಲ್ಲಿ ದಿನಾಂಕ: 08.05.2006 ರಂದು ನಡೆದ ಕರ್ನಾಟಕ ಚಿತ್ರಕಲಾ ಪರಿಷತ್ತಿನ ಸರ್ವಸದಸ್ಯರ ಸಭೆಯಲ್ಲಿ ಶ್ರೀಯುತ ಬಿ.ಎಲ್. ಶಂಕರ್ ರವರನ್ನು ಹಾಗೂ ಶ್ರೀ ಡಿ.ಕೆ. ಚೌಟರವರನ್ನು ಕ್ರಮವಾಗಿ ಕರ್ನಾಟಕ ಚಿತ್ರಕಲಾ ಪರಿಷತ್ತಿನ ಅಧ್ಯಕ್ಷರು ಮತ್ತು ಜನರಲ್ ಸೆಕ್ರೆಟರಿಯಾಗಿ ಮುಂದುವರೆಸಿದೆ ಎಂದು ಹಾಗೂ ಕೆಲವು ಸದಸ್ಯರನ್ನು ಅಜೀವ ಸದಸ್ಯತ್ವದಿಂದ ತೆಗೆದುಹಾಕಲಾಗಿದೆ ಎಂದು ತಿಳಿಸಿದೆ.

ಮೇಲೆ 3 ರಲ್ಲಿ ಓದಲಾದ ಪತ್ರದಲ್ಲಿ ಜಿಲ್ಲಾ ನೋಂದಣಾಧಿಕಾರಿಗಳು (ಸಂಘ ಮತ್ತು ಸಂಸ್ಥೆಗಳು), ಬೆಂಗಳೂರು ಇವರ ವರದಿಯಲ್ಲಿ ಈ ಪ್ರಕರಣದಲ್ಲಿ ವಿಚಾರಣೆ ನಡೆಸುತ್ತಿರುವುದಾಗಿ ಹಾಗೂ ಈ ವೇಳೆ ಆಡಳಿತಾಧಿಕಾರಿಯನ್ನು ನೇಮಿಸುವುದು ಅವಶ್ಯಕವಿದೆ ಎಂದು ತಿಳಿಸಿದ್ದಾರೆ.

ಮೇಲೆ ಓದಲಾಗಿರುವ ಪತ್ರಗಳಿಂದ ಕರ್ನಾಟಕ ಚಿತ್ರಕಲಾ ಪರಿಷತ್ತಿನ ಪರಿಸ್ಥಿತಿ ಗಂಭೀರವಾಗಿದ್ದು ಎರಡು ಗುಂಪುಗಳ ನಡುವೆ ಘರ್ಷಣೆ ನಡೆಯುತ್ತಿರುವುದರಿಂದ ಆಡಳಿತ ಸುಗಮವಾಗಿ ನಡೆಯುತ್ತಿಲ್ಲವೆಂಬ ಅಂಶ ಸರ್ಕಾರದ ಗಮನಕ್ಕೆ ಬಂದಿದೆ. ಆದ್ದರಿಂದ ಸರ್ಕಾರವು ಸಾರ್ವಜನಿಕ ಹಿತದೃಷ್ಟಿಯನ್ನು ಗಣನೆಗೆ ತೆಗೆದುಕೊಂಡು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಕಂಇ 33 ಮುನೋಸೊ 2006, ಬೆಂಗಳೂರು, ದಿನಾಂಕ: 13ನೇ ಮೇ 2006**

ಪ್ರಸ್ತಾವನೆಯಲ್ಲಿ ತಿಳಿಸಿರುವ ವಿವರಗಳ ಹಿನ್ನೆಲೆಯಲ್ಲಿ ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960ರ ಕಲಂ 27-ಎ ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರದ ವಾರ್ತಾ ಪ್ರವಾಸೋದ್ಯಮ ಹಾಗೂ ಯುವಜನ ಸೇವೆಗಳ ಇಲಾಖೆ, ಪ್ರಧಾನ ಕಾರ್ಯದರ್ಶಿ ಶ್ರೀಮತಿ ಎಲ್. ಶಾಂತಕುಮಾರಿ ಐ.ಎ.ಎಸ್., ರವರನ್ನು ಕರ್ನಾಟಕ ಚಿತ್ರಕಲಾ ಪರಿಷತ್ತು, ಬೆಂಗಳೂರು ಇಲ್ಲಿನ ಆಡಳಿತಾಧಿಕಾರಿ ಹುದ್ದೆಗೆ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಸರ್ಕಾರವು ನೇಮಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಅರವಿಂದ್ ಜಿ. ರಿಸಬುದ್**

ಪಿ.ಆರ್. 792 ಸರ್ಕಾರದ ಕಾರ್ಯದರ್ಶಿಗಳು,

(ಭೂ ಸುಧಾರಣೆ, ನೋಂದಣಿ ಮತ್ತು ಮುದ್ರಾಂಕ), ಕಂದಾಯ ಇಲಾಖೆ.

## ಸಹಕಾರ ಸಚಿವಾಲಯ

**ವಿಷಯ:** ಮದ್ದೂರು ಪ್ರಾಥಮಿಕ ಸಹಕಾರ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕ್ (ನಿ) ಇದರ 2004-05ನೇ ಸಾಲಿನ ವಾರ್ಷಿಕ ಮಹಾಸಭೆಯನ್ನು ನಡೆಸಲು ಅವಧಿ ವಿಸ್ತರಣೆ ಬಗ್ಗೆ.

**ಓದಲಾಗಿದೆ:** ಅಧ್ಯಕ್ಷರು ಪ್ರಾಥಮಿಕ ಸಹಕಾರ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕ್ (ನಿ) ಇವರ ಪತ್ರ ದಿನಾಂಕ: 21.02.2006.

**ಪ್ರಸ್ತಾವನೆ:**

ಮೇಲೆ ಓದಲಾದ ಪತ್ರದಲ್ಲಿ ಮದ್ದೂರು ಪ್ರಾಥಮಿಕ ಸಹಕಾರ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕ್ (ನಿ) ಇದರ 2004-05ನೇ ಸಾಲಿನ ವಾರ್ಷಿಕ ಮಹಾಸಭೆಯನ್ನು ದಿನಾಂಕ: 31.03.2006 ರೊಳಗೆ ನಡೆಸಬೇಕಾಗಿದ್ದು ಬ್ಯಾಂಕಿನ ಆರ್ಥಿಕ ಪರಿಸ್ಥಿತಿ ಉತ್ತಮವಾಗಿಲ್ಲದೆ ಇರುವುದರಿಂದ ಹಾಗೂ

ವಾರ್ಷಿಕ ಮಹಾಸಭೆಯನ್ನು ನಡೆಸಲು ಸುಮಾರು ನಲವತ್ತು ಸಾವಿರದಿಂದ ಐವತ್ತು ಸಾವಿರದವರೆಗೆ ಖರ್ಚಾಗುವುದರಿಂದ 2004-05ನೇ ಸಾಲಿನ ವಾರ್ಷಿಕ ಮಹಾಸಭೆಯನ್ನು ನಡೆಸಲು ಸೆಪ್ಟೆಂಬರ್ 2006 ರವರೆಗೆ ಕಾಲಾವಕಾಶ ನೀಡಬೇಕೆಂದು ಸದರಿ ಬ್ಯಾಂಕಿನ ಅಧ್ಯಕ್ಷರು ಕೋರಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಒ 70 ಸಿಎಲ್ಎಮ್ 2006, ಬೆಂಗಳೂರು, ದಿನಾಂಕ: 10ನೇ ಏಪ್ರಿಲ್ 2006**

ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 121 ರಡಿಯಲ್ಲಿ ಪ್ರದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ, ಸರ್ಕಾರವು ಮದ್ದೂರು ಪ್ರಾಥಮಿಕ ಸಹಕಾರ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕ್ (ನಿ) ಇದರ 2004-05ನೇ ಸಾಲಿನ ವಾರ್ಷಿಕ ಮಹಾಸಭೆಯನ್ನು ನಡೆಸಲು ದಿನಾಂಕ: 30.09.2006ರ ವರೆಗೆ ಕಾಲಾವಕಾಶ ನೀಡಲು ಅನುವಾಗುವಂತೆ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 27(1)ರ ಉಪಬಂಧಗಳು ಕೆಳಗಿನ ಮಾರ್ಪಾಟಿನೊಂದಿಗೆ ಅನ್ವಯವಾಗುತ್ತದೆಂದು ನಿರ್ದೇಶಿಸುತ್ತದೆ ಎಂದರೆ:

27ನೇ ಪ್ರಕರಣ ಉಪಪ್ರಕರಣ (1)ರ ಪರಂತುಕದಲ್ಲಿನ "ಆರು ತಿಂಗಳು" ಎಂಬ ಪದಗಳಿಗೆ ಬದಲಾಗಿ "ಹನ್ನೆರಡು ತಿಂಗಳು" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

**ಸೂಚನೆ:** ಪ್ರಕರಣ 27(1)ಕ್ಕೆ ಮಾಡಿದ ಈ ಮಾರ್ಪಾಡು ದಿನಾಂಕ: 30.09.2006ರ ವರೆಗೆ ಜಾರಿಯಲ್ಲಿರತಕ್ಕದ್ದು. ಈ ಅವಧಿ ಮುಗಿದ ನಂತರ ಈ ಆದೇಶದ ಮಾರ್ಪಾಡಿಗೆ ಮೊದಲು ಜಾರಿಯಲ್ಲಿದ್ದಂತೆ ಸದರಿ 27(1)ಕ್ಕೆ ಪ್ರಕರಣದ ಉಪಬಂಧಗಳು ಪುನಃ ಜಾರಿಗೆ ಬರತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎಸ್. ಹುಬ್ಬಾಚಾರಿ**

ಪಿ.ಆರ್. 793 ವಿಶೇಷ ಕರ್ತವ್ಯಾಧಿಕಾರಿ, ಸಹಕಾರ ಇಲಾಖೆ.

## ಜಲ ಸಂಪನ್ಮೂಲ ಸಚಿವಾಲಯ

**ಜ್ಞಾಪನಾ ಸಂಖ್ಯೆ: ಜಸಂಇ 38 ಎನ್‌ಪಿಸಿ 2006, ಬೆಂಗಳೂರು, ದಿನಾಂಕ: 12ನೇ ಮೇ 2006**

**ವಿಷಯ:** ನೀರಾವರಿ ಯೋಜನೆಗಳ ತಾಂತ್ರಿಕ ಸಲಹಾ ಸಮಿತಿಗೆ ಪ್ರಧಾನ ಇಂಜಿನಿಯರ್, ಜಲ ಸಂಪನ್ಮೂಲ ಅಭಿವೃದ್ಧಿ ಸಂಸ್ಥೆ, ಬೆಂಗಳೂರು, ಇವರನ್ನು ವಿಶೇಷ ಆಹ್ವಾನಿತರನ್ನಾಗಿ ಸೇರ್ಪಡೆಗೊಳಿಸುವ ಬಗ್ಗೆ.

ಸರ್ಕಾರಿ ಆದೇಶ ಸಂಖ್ಯೆ: ಜಸಂಇ 15 ಎನ್‌ಪಿಸಿ 2006 (ಭಾಗ), ದಿನಾಂಕ: 15.03.2006 ರಲ್ಲಿ ರಚಿಸಲಾಗಿರುವ ನೀರಾವರಿ ಯೋಜನೆಗಳ ತಾಂತ್ರಿಕ ಸಲಹಾ ಸಮಿತಿಗೆ ಪ್ರಧಾನ ಇಂಜಿನಿಯರ್, ಜಲ ಸಂಪನ್ಮೂಲ ಅಭಿವೃದ್ಧಿ ಸಂಸ್ಥೆ, ಬೆಂಗಳೂರು, ಇವರನ್ನು ಶಾಶ್ವತ ವಿಶೇಷ ಆಹ್ವಾನಿತರನ್ನಾಗಿ ಸೇರ್ಪಡೆಗೊಳಿಸಲಾಗಿದೆ. ಇವರು ತಾಂತ್ರಿಕ ಸಲಹಾ ಸಮಿತಿಯ ಪ್ರತಿ ಸಭೆಯಲ್ಲಿ ಹಾಜರಿರುವಂತೆ ಸೂಚಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ.ಎಸ್. ರಂಗರಾಜು**

ಪಿ.ಆರ್. 798 ವಿಶೇಷ ಕರ್ತವ್ಯಾಧಿಕಾರಿ (ತಾಂತ್ರಿಕ, ಎಂಎಂಐ-3),
ಜಲ ಸಂಪನ್ಮೂಲ ಇಲಾಖೆ.

## ಒಳಾಡಳಿತ ಸಚಿವಾಲಯ

**ವಿಷಯ:** ಶ್ರೀ ಸುದೀಪ್ ಬಂಗೇರಾ, ಸರ್ಕಾರಿ ಅಭಿಯೋಜಕರು ಮತ್ತು ಶ್ರೀಮತಿ ಎಂ. ಶಶಿರೇಖಾ, ಬೆರಳಚ್ಚುಗಾರ್ತಿ, ಇವರುಗಳ ವಿರುದ್ಧ ಇಲಾಖಾ ವಿಚಾರಣೆಯ ಬಗ್ಗೆ.

**ಓದಲಾಗಿದೆ:**
1) ಸರ್ಕಾರಿ ಆದೇಶ ಸಂಖ್ಯೆ: ಒಇ 275 ಪಿಪಿಇ 2005, ಬೆಂಗಳೂರು, ದಿನಾಂಕ: 28.1.2006.
2) ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರ ಪತ್ರ ಸಂಖ್ಯೆ: ಡಿಪಿಎನ್:ಬಿಸಿ/ಸಿಆರ್-02/2002, ದಿನಾಂಕ: 4.4.2006.

**ಪ್ರಸ್ತಾವನೆ:**

ಶ್ರೀ ಸುದೀಪ್ ಬಂಗೇರಾ, ಸರ್ಕಾರಿ ಅಭಿಯೋಜಕರು, ಮಡಿಕೇರಿ ಇವರು ಹಾಗೂ ಶ್ರೀಮತಿ ಎಂ. ಶಶಿರೇಖಾ, ಬೆರಳಚ್ಚುಗಾರ್ತಿ ವಿರುದ್ಧ ವಿಚಾರಣೆಯನ್ನು ನಡೆಸಲು ಮೇಲೆ ಕ್ರಮಾಂಕ 1 ರಲ್ಲಿ ಓದಲಾಗಿರುವ ದಿನಾಂಕ: 28.1.2006ರ ಆದೇಶದಲ್ಲಿ ವಿಚಾರಣಾಧಿಕಾರಿಯನ್ನು ನೇಮಿಸಲಾಗಿದ್ದು ವಿಚಾರಣಾ ಪ್ರಾಧಿಕಾರಿಯ ಮುಂದೆ ಸರ್ಕಾರದ ಪರವಾಗಿ ದಾಖಲೆಗಳನ್ನು ಮಂಡಿಸಲು ಕರ್ನಾಟಕ ಸರ್ಕಾರ ಸೇವಾ ನಿಯಮ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11(5)(ಸಿ) ರನ್ವಯ ಶ್ರೀಯುತ ಶ್ರೀ ಎಲ್.ಎ.ಜವಳಿ, ಅಭಿಯೋಗ ಉಪ ನಿರ್ದೇಶಕರು, ಬೆಂಗಳೂರು ವಿಭಾಗ ಇವರನ್ನು ಮಂಡನಾಧಿಕಾರಿಯಾಗಿ ನೇಮಿಸಿ ಆದೇಶವನ್ನು ಹೊರಡಿಸಲಾಗಿದೆ.

ಮೇಲೆ ಕ್ರಮಾಂಕ 2 ರಲ್ಲಿ ಓದಲಾಗಿರುವ ದಿನಾಂಕ: 4.4.2005ರ ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರ ಪತ್ರದಲ್ಲಿ ಶ್ರೀ ಎಲ್.ಎ. ಜವಳಿ ಇವರು ದಿನಾಂಕ: 22.3.2006 ರಂದು ಒಂದು ಮನವಿಯನ್ನು ಸಲ್ಲಿಸಿ ತಾವು ದಿನಾಂಕ: 31.5.2006 ರಂದು ನಿವೃತ್ತರಾಗಲಿರುವುದರಿಂದಲೂ ಮತ್ತು ಆ ವೇಳೆಗೆ ಇಲಾಖಾ ವಿಚಾರಣೆ ಮುಕ್ತಾಯವಾಗುವ ಸಂಭವವಿರುವುದಿಲ್ಲವೆಂದು ತಿಳಿಸಿರುವುದರಿಂದ ಅವರು ಮಂಡನಾಧಿಕಾರಿಯಾಗಿ ಕಾರ್ಯ ನಿರ್ವಹಿಸುವುದು ಸೂಕ್ತವಾಗಲಾರದು, ಆದ ಕಾರಣ ಶ್ರೀ ಎಲ್.ಎ. ಜವಳಿ ಇವರ ಬದಲಿಗೆ ಶ್ರೀ ಎಸ್.ಎನ್.ಪಾಟೀಲ್, ಅಭಿಯೋಗ ಉಪ ನಿರ್ದೇಶಕರು, ಅಭಿಯೋಗ ನಿರ್ದೇಶಕರ ಕಛೇರಿ, ಬೆಂಗಳೂರು ಇವರನ್ನು ಸದರಿ ಪ್ರಕರಣದಲ್ಲಿ ಮಂಡನಾಧಿಕಾರಿಯಾಗಿ ನೇಮಿಸುವಂತೆ ಕೋರಿರುತ್ತಾರೆ. ವಿಷಯವನ್ನು ಕೂಲಂಕಷವಾಗಿ ಪರಿಶೀಲಿಸಿ ಶ್ರೀ ಎಲ್.ಎ. ಜವಳಿ ಇವರ ಬದಲಾಗಿ ಶ್ರೀ ಎಸ್.ಎನ್. ಪಾಟೀಲ್, ಅಭಿಯೋಗ ಉಪ ನಿರ್ದೇಶಕರು ಇವರನ್ನು ಮಂಡನಾಧಿಕಾರಿಯಾಗಿ ನೇಮಕ ಮಾಡಲು ತೀರ್ಮಾನಿಸಲಾಗಿದೆ. ಆದುದರಿಂದ ಈ ಕೆಳಕಂಡಂತೆ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಒಇ 275 ಪಿಪಿಇ 2005, ಬೆಂಗಳೂರು, ದಿನಾಂಕ: 9ನೇ ಮೇ 2006**

ಪ್ರಸ್ತಾವನೆಯಲ್ಲಿ ಸೂಚಿಸಿರುವ ಕಾರಣಕ್ಕಾಗಿ ದಿನಾಂಕ: 28.01.2006ರ ಸರ್ಕಾರಿ ಆದೇಶವನ್ನು ಭಾಗಶಃ ಮಾರ್ಪಡಿಸಿ ಸದರಿ ಪ್ರಕರಣದಲ್ಲಿ ಶ್ರೀ ಎಲ್.ಎ. ಜವಳಿ, ಮಂಡನಾಧಿಕಾರಿ ಇವರ ಬದಲಿಗೆ ವಿಚಾರಣಾ ಅಧಿಕಾರಿಯವರ ಮುಂದೆ ಸರ್ಕಾರದ ಪರವಾಗಿ ದಾಖಲೆಗಳನ್ನು ಮಂಡಿಸಲು

ಕರ್ನಾಟಕ ಸರ್ಕಾರ ಸೇವಾ ನಿಯಮ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11(5) (ಸಿ) ರನ್ವಯ ಶ್ರೀ ಎಸ್.ಎನ್. ಪಾಟೀಲ್, ಅಭಿಯೋಗ ಉಪ ನಿರ್ದೇಶಕರು, ಅಭಿಯೋಗ ನಿರ್ದೇಶಕರ ಕಛೇರಿ, ಬೆಂಗಳೂರು ಇವರನ್ನು ಮಂಡನಾಧಿಕಾರಿಯಾಗಿ ನೇಮಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎ. ಕುಲಕರ್ಣಿ**

ಪಿ.ಆರ್. 796 ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಕಾ. ಮತ್ತು ಸು. ಮತ್ತು ಅಭಿಯೋಗಗಳು).

## ಕನ್ನಡ ಮತ್ತು ಸಂಸ್ಕೃತಿ ಸಚಿವಾಲಯ

**ವಿಷಯ:** ಹಂಪಿ ವಿಶ್ವ ಪರಂಪರೆ ಪ್ರದೇಶ ನಿರ್ವಹಣಾ ಪ್ರಾಧಿಕಾರಕ್ಕೆ ಅನುದಾನ ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರಿ ಆದೇಶ ಸಂಖ್ಯೆ: ಸಂಕಇ 60 ಸ್ವೀಮರ 2006, ದಿನಾಂಕ: 7.4.2006.

2) ಆಯುಕ್ತರು, ಹಂಪಿ ವಿಶ್ವ ಪರಂಪರೆ ಪ್ರದೇಶ ನಿರ್ವಹಣಾ ಪ್ರಾಧಿಕಾರ, ಹೊಸಪೇಟೆ ಅವರ ಪತ್ರ ಸಂಖ್ಯೆ: ಹವಿಪಪ್ರ ನಿಪ್ರಾ:ಹೊ:2006-07/957, ದಿನಾಂಕ: 12.4.2006.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ: (1)ರ ಸರ್ಕಾರದ ಆದೇಶದಲ್ಲಿ 2006-07ನೇ ಸಾಲಿಗೆ ಹಂಪಿ ವಿಶ್ವ ಪರಂಪರೆ ಪ್ರದೇಶ ನಿರ್ವಹಣಾ ಪ್ರಾಧಿಕಾರಕ್ಕೆ ಲೆಕ್ಕ ಶೀರ್ಷಿಕೆ 2205-00-103-0-18 (ಯೋಜನೇತರ) 101 ಸಹಾಯಾನುದಾನ ಇದರಡಿಯಲ್ಲಿ ರೂ.25.00 ಲಕ್ಷ ಅನುದಾನವನ್ನು ನಿಗದಿಪಡಿಸಲಾಗಿದೆ.

ಮೇಲೆ ಓದಲಾದ (2)ರ ಪತ್ರದಲ್ಲಿ ಆಯುಕ್ತರು, ಹಂಪಿ ವಿಶ್ವ ಪರಂಪರೆ ಪ್ರದೇಶ ನಿರ್ವಹಣಾ ಪ್ರಾಧಿಕಾರ, ಇವರು ಸದರಿ ಅನುದಾನವನ್ನು ಪ್ರಾಧಿಕಾರದ ಆಡಳಿತಾತ್ಮಕ ವೆಚ್ಚ, ನಕ್ಷೆ ತಯಾರಿಕೆ, ಪ್ರಾಧಿಕಾರದ ವ್ಯಾಪ್ತಿಯಲ್ಲಿ ಬರುವ ಸ್ಮಾರಕಗಳ ಸಂರಕ್ಷಣೆ ಪುರಾತನ ಮನೆಗಳ ಮೋಜಣಿ ಇತ್ಯಾದಿಗಳ ಖರ್ಚುಗಳಿಗೆ ಬಿಡುಗಡೆ ಮಾಡುವಂತೆ ಕೋರಿರುತ್ತಾರೆ. ನಿರ್ದೇಶಕರ ಕೋರಿಕೆಯನ್ನು ಪರಿಶೀಲಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಂಕಇ 70 ಕೆಎಂಯು 2006, ಬೆಂಗಳೂರು, ದಿನಾಂಕ: 23ನೇ ಮೇ 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನಲೆಯಲ್ಲಿ ಹಂಪಿ ವಿಶ್ವ ಪರಂಪರೆ ಪ್ರದೇಶ ನಿರ್ವಹಣಾ ಪ್ರಾಧಿಕಾರ, ಹೊಸಪೇಟೆ ಇದಕ್ಕೆ 2006-07ನೇ ಸಾಲಿನ ಆಯವ್ಯಯ ಲೆಕ್ಕ ಶೀರ್ಷಿಕೆ: 2205-00-103-0-18 (ಯೋಜನೇತರ) ಉಪಶೀರ್ಷಿಕೆ 101 ಸಹಾಯಾನುದಾನ ಅಡಿಯಲ್ಲಿ ಒದಗಿಸಲಾಗಿರುವ ಖರ್ಚುಗಳನ್ನು ರೂ.25.00 ಲಕ್ಷಗಳ ಅನುದಾನದಲ್ಲಿ ಜುಲೈ 2006ರ ವರೆಗಿನ ಖರ್ಚುಗಳನ್ನು ಭರಿಸಲು ರೂ.8.00 (ರೂಪಾಯಿ ಎಂಟು ಲಕ್ಷಗಳು ಮಾತ್ರ) ಗಳನ್ನು ಈ ಕೆಳಕಂಡ ಷರತ್ತುಗಳಿಗೊಳಪಟ್ಟು ಬಿಡುಗಡೆ ಮಾಡಲು ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಮೈಸೂರು ಇವರಿಗೆ ಈ ಮೂಲಕ ಅನುಮತಿ ನೀಡಲಾಗಿದೆ.

(1) ಸರ್ಕಾರಿ ಯಾವ ಉದ್ದೇಶಕ್ಕಾಗಿ ಹಣ ಮಂಜೂರು ಮಾಡಿದೆಯೋ ಅದೇ ಉದ್ದೇಶಕ್ಕೆ ಬಳಸುವುದು.

(2) ಹಿಂದಿನ ಸಾಲುಗಳಲ್ಲಿ ಸರ್ಕಾರ ಮಂಜೂರು ಮಾಡಿದ ಹಣ ಸಮರ್ಪಕವಾಗಿ ಬಳಕೆಯಾದ ಬಗ್ಗೆ ಹಣ ಬಳಕೆ ಪ್ರಮಾಣ ಪತ್ರ ಸಲ್ಲಿಸುವುದು.

(3) ಈ ಕಾರ್ಯಚಟುವಟಿಕೆಗಳ ಬಗ್ಗೆ ಅನುಪಾಲನಾ ವರದಿ ಸಲ್ಲಿಸುವುದು.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರ ಟಿಪ್ಪಣಿ ಸಂಖ್ಯೆ: ಶಿಇ 378 ಐಎಫ್ (ಬಿ.ಎ) 2006, ದಿನಾಂಕ: 3.5.2006 ರಲ್ಲಿ ನೀಡಿರುವ ಅಭಿಪ್ರಾಯದ ಮೇರೆಗೆ ಹಾಗೂ ಸರ್ಕಾರದ ಅಧಿಕೃತ ಜ್ಞಾಪನ ಸಂಖ್ಯೆ: ಎಫ್‌ಡಿ 3 ಬಿಪಿಇ 2006 ದಿನಾಂಕ: 31.3.2006 ರನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ಸಾಂಬಶಿವಂ**

ಪಿ.ಆರ್. 799 ಪೀಠಾಧಿಕಾರಿ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ (ಆಡಳಿತ ಕನ್ನಡ).

## ಒಳಾಡಳಿತ ಸಚಿವಾಲಯ

**ವಿಷಯ:** ಶ್ರೀ ಆರ್.ಡಿ. ಶಿರಗುಪ್ಪಿ, ಅಭಿಯೋಗ ಉಪನಿರ್ದೇಶಕರು, ಕರ್ನಾಟಕ ಪೊಲೀಸ್ ಅಕಾಡೆಮಿ, ಮೈಸೂರು ಇವರ ವಿರುದ್ಧ ಇಲಾಖಾ ವಿಚಾರಣೆ ಬಗ್ಗೆ.

**ಓದಲಾಗಿದೆ:** 1) ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರ ಪತ್ರ ಸಂಖ್ಯೆ: ಡಿಪಿಎನ್:ಎಸ್ಎಂಜಿ-1265/2001, ದಿನಾಂಕ: 13.6.2002.

2) ಕಾರಣ ಕೇಳುವ ತಿಳುವಳಿಕೆ ಪತ್ರ ಸಂಖ್ಯೆ: ಲಾ 33 ಪಿಪಿಇ 2002, ದಿನಾಂಕ: 31.8.2002.

3) ಅಧಿಕಾರಿಯ ಸಮಜಾಯಿಷಿ ಪತ್ರ ದಿನಾಂಕ: 7.10.2002.

4) ವಿಚಾರಣಾಧಿಕಾರಿ ಮತ್ತು ಮಂಡನಾಧಿಕಾರಿ ನೇಮಕದ ಆದೇಶ ಸಂಖ್ಯೆ: ಲಾ 33 ಪಿಪಿಇ 2002, ದಿನಾಂಕ: 7.5.2003 ಮತ್ತು ದಿನಾಂಕ: 13.8.2003.

5) ಇಲಾಖಾ ವಿಚಾರಣಾ ವರದಿ ಸಂಖ್ಯೆ: ಲಾ 33 ಪಿಪಿಇ 2002, ದಿನಾಂಕ: 23.12.2003.

6) 2ನೇ ಕಾರಣ ಕೇಳುವ ತಿಳುವಳಿಕೆ ಪತ್ರ ಸಂಖ್ಯೆ: ಲಾ 33 ಪಿಪಿಇ 2002, ದಿನಾಂಕ: 11.2.2004.

7) ಅಧಿಕಾರಿಯ ಹೇಳಿಕೆ ಪತ್ರ ದಿನಾಂಕ: 13.3.2004.

**ಪ್ರಸ್ತಾವನೆ:**

ಮೇಲೆ (1) ರಲ್ಲಿ ಓದಲಾಗಿರುವ ಪತ್ರದಲ್ಲಿ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ನಿರ್ದೇಶಕರು ಮೇಲೆ (1) ರಲ್ಲಿ ಓದಲಾಗಿರುವ ಪತ್ರದಲ್ಲಿ ಶ್ರೀ ಆರ್.ಡಿ. ಶಿರಗುಪ್ಪಿ, ಅಭಿಯೋಗ ಉಪ ನಿರ್ದೇಶಕರು, ಕರ್ನಾಟಕ ಪೊಲೀಸ್ ಅಕಾಡೆಮಿ, ಮೈಸೂರು ಇವರು ಶಿವಮೊಗ್ಗ ಅಧಿಕ ಸತ್ರ ನ್ಯಾಯಾಲಯದ ಎಸ್.ಸಿ.ಸಂಖ್ಯೆ: 102/2000ರ ಪ್ರಕರಣದ ನಿರ್ವಹಣೆಯಲ್ಲಿ ಎಸಗಿರುವ ಕರ್ತವ್ಯಲೋಪಗಳ ಬಗ್ಗೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ. ಮೇಲೆ

(2) ರಲ್ಲಿ ಓದಲಾಗಿರುವ ಕಾರಣ ಕೇಳುವ ನೋಟೀಸಿನಲ್ಲಿ ಈ ಕೆಳಕಂಡ ಆರೋಪಗಳನ್ನು ಮಾಡಿ ಕರ್ನಾಟಕ ಸರ್ಕಾರ ಸೇವಾ ನಿಯಮ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳ ನಿಯಮ 11ರ ಅಡಿಯಲ್ಲಿ ಇಲಾಖಾ ವಿಚಾರಣೆ ಕೈಗೊಳ್ಳುವ ಬಗ್ಗೆ ತಿಳುವಳಿಕೆ ಪತ್ರವನ್ನು ದಿನಾಂಕ: 31.8.2002 ರಲ್ಲಿ ಜಾರಿ ಮಾಡಲಾಗಿರುತ್ತದೆ.

1) ಶ್ರೀ ಆರ್.ಡಿ. ಶಿರಗುಪ್ಪಿ, ಅಧಿಕ ಸರ್ಕಾರಿ ಅಭಿಯೋಜಕರು, ಶಿವಮೊಗ್ಗ ಆದ ನೀವು ಶಿವಮೊಗ್ಗ ಅಧಿಕ ಜಿಲ್ಲಾ ಸತ್ರ ನ್ಯಾಯಾಲಯದ ಎಸ್‌ಸಿ.ಸಂಖ್ಯೆ: 102/2000 (ಶಿಕಾರಿಪುರ ಆರಕ್ಷಕ ಠಾಣೆ ಗುನ್ನೆ ಸಂಖ್ಯೆ:80/2000)ರ ಪ್ರಕರಣದ ದೋಷಾರೋಪಣ ಪಟ್ಟಿಯನ್ನು ಪರಿಶೀಲಿಸುವಾಗ, ಸದರಿ ಪ್ರಕರಣದಲ್ಲಿ ಹಠ ಸಂಭೋಗಕ್ಕೆ ಒಳಗಾದ ಕು: ಶೃತಿ, 5-6 ವರ್ಷ ಎಂಬ ಮಗುವನ್ನು ಸಾಕ್ಷಿಯನ್ನಾಗಿ ನಮೂದಿಸುವಂತೆ ಪ್ರಕರಣದ ತನಿಖಾಧಿಕಾರಿಗಳಿಗೆ ಸೂಕ್ತ ಸೂಚನೆಯನ್ನು ನೀಡಿರುವುದಿಲ್ಲ. ಪ್ರಕರಣದ ಪ್ರಮುಖ ಸಾಕ್ಷಿಯನ್ನು ಸಾಕ್ಷಿದಾರರ ಪಟ್ಟಿಯಲ್ಲಿ ಸೇರಿಸುವ ಸಂಬಂಧದಲ್ಲಿ ನೀವು ಯಾವುದೇ ಕ್ರಮವನ್ನು ಕೈಗೊಂಡಿರುವುದಿಲ್ಲ. ಇದರಿಂದಾಗಿ ನೀವು ನಿಮ್ಮ ಪ್ರಮುಖ ಕರ್ತವ್ಯ ನಿರ್ವಹಣೆಯಲ್ಲಿ ವಿಫಲರಾಗಿ ಸರ್ಕಾರಿ ನೌಕರರಿಗೆ ತಕ್ಕುದಲ್ಲದ ರೀತಿಯಲ್ಲಿ ನಡೆದುಕೊಂಡು ಕರ್ತವ್ಯ ಲೋಪವನ್ನು ಎಸಗಿ ಕರ್ನಾಟಕ ಸರ್ಕಾರ ಸೇವ (ನಡತೆ) ನಿಯಮಗಳು 1966ರ ನಿಯಮ 3(i)ರ ಉಪನಿಯಮ (ii) ಮತ್ತು (iii) ವನ್ನು ಸ್ಪಷ್ಟವಾಗಿ ಉಲ್ಲಂಘಿಸಿರುತ್ತೀರಿ.

2) ಶ್ರೀ ಆರ್.ಡಿ. ಶಿರಗುಪ್ಪಿ, ಅಧಿಕ ಸರ್ಕಾರಿ ಅಭಿಯೋಜಕರು, ಶಿವಮೊಗ್ಗ ಆದ ನೀವು ಶಿವಮೊಗ್ಗ ಅಧಿಕ ಜಿಲ್ಲಾ ಸತ್ರ ನ್ಯಾಯಾಲಯದ ಎಸ್‌ಸಿ.ಸಂಖ್ಯೆ: 102/2000 (ಶಿಕಾರಿಪುರ ಆರಕ್ಷಕ ಠಾಣೆ ಗುನ್ನೆ ಸಂಖ್ಯೆ:80/2000)ರ ಪ್ರಕರಣವನ್ನು ನ್ಯಾಯಾಲಯದಲ್ಲಿ ನಡೆಸುವಾಗ ಸದರಿ ಪ್ರಕರಣದಲ್ಲಿ ಹಠ ಸಂಭೋಗಕ್ಕೆ ಒಳಗಾದ ಕು: ಶೃತಿ, 5-6 ವರ್ಷ ಎಂಬ ಮಗು ಪ್ರಕರಣದ ಫಿರ್ಯಾದುದಾರರಾದ ಸದರಿ ಮಗುವಿನ ತಾಯಿಯೊಂದಿಗೆ ನ್ಯಾಯಾಲಯಕ್ಕೆ ಬಂದಿದ್ದರೂ, ಕು: ಶೃತಿ ಎಂಬಾಕೆಯನ್ನು ಸಾಕ್ಷಿಯನ್ನಾಗಿ ನ್ಯಾಯಾಲಯದಲ್ಲಿ ವಿಚಾರಣೆ ಮಾಡಿರುವುದಿಲ್ಲ, ಹಾಗೂ ವಿಚಾರಣೆ ಮಾಡುವ ಬಗ್ಗೆ ನೀವು ಯಾವುದೇ ಕ್ರಮವನ್ನು ಕೈಗೊಂಡಿರುವುದಿಲ್ಲ. ನೀವು ಒಬ್ಬ ಜವಾಬ್ದಾರಿಯುತ ಸರ್ಕಾರಿ ಕಾನೂನು ಅಧಿಕಾರಿಯಾಗಿದ್ದು, ನಿಮ್ಮ ಪ್ರಮುಖ ಕರ್ತವ್ಯವನ್ನು ಸರಿಯಾಗಿ ನಿರ್ವಹಿಸದೇ ಬೇಜವಾಬ್ದಾರಿಯಿಂದ ನಡೆದುಕೊಂಡು ಸರ್ಕಾರಿ ನೌಕರರಿಗೆ ತಕ್ಕುದಲ್ಲದ ರೀತಿಯಲ್ಲಿ ವರ್ತಿಸಿ ಕರ್ತವ್ಯ ಲೋಪವೆಸಗಿ ಕರ್ನಾಟಕ ಸರ್ಕಾರ ಸೇವ (ನಡತೆ) ನಿಯಮಗಳು 1966ರ ನಿಯಮ 3(i)ರ ಉಪನಿಯಮ (ii) ಮತ್ತು (iii) ವನ್ನು ಸ್ಪಷ್ಟವಾಗಿ ಉಲ್ಲಂಘಿಸಿರುತ್ತೀರಿ.

ಆರೋಪಿತ ಸರ್ಕಾರಿ ಅಧಿಕಾರಿಯು ಮೇಲೆ 3 ರಲ್ಲಿ ಓದಲಾಗಿರುವ ದಿನಾಂಕ: 7.10.2002 ರಂದು ಸಲ್ಲಿಸಿರುವ ಸಮಜಾಯಿಷಿಯು ತೃಪ್ತಿಕರವಾಗಿ ಕಂಡುಬರದ ಕಾರಣ ಮೇಲೆ 4 ರಲ್ಲಿ ಓದಲಾಗಿರುವ ಆದೇಶದಲ್ಲಿ ಸದರಿ ಆರೋಪಿತ ಸರ್ಕಾರಿ ಅಧಿಕಾರಿಯ ಮೇಲೆ ಮಾಡಲಾಗಿರುವ ಆರೋಪಗಳ ಸತ್ಯಾಸತ್ಯತೆಯನ್ನು ತಿಳಿಯಲು ವಿಚಾರಣಾಧಿಕಾರಿ ಮತ್ತು ಮಂಡನಾಧಿಕಾರಿ ನೇಮಕ ಮಾಡಲಾಗಿದೆ. ವಿಚಾರಣಾಧಿಕಾರಿಯವರು ಮೇಲೆ 5 ರಲ್ಲಿ ಓದಲಾಗಿರುವ ಪತ್ರದೊಡನೆ ಇಲಾಖಾ ವಿಚಾರಣಾ ವರದಿಯನ್ನು ಸಲ್ಲಿಸಿರುತ್ತಾರೆ. ವಿಚಾರಣಾ ಅವಧಿಯಲ್ಲಿ ಶಿಸ್ತು ಪ್ರಾಧಿಕಾರದ ಪರವಾಗಿ ಮಂಡನಾಧಿಕಾರಿಯು ಪಿಡಬ್ಲ್ಯೂ-1 (ಅಭಿಯೋಗ ಜಂಟಿ ನಿರ್ದೇಶಕರು, ಶ್ರೀ ಸದಾಶಿವಮೂರ್ತಿ) ಮತ್ತು ಪಿಡಬ್ಲ್ಯೂ-29 (ತನಿಖಾಧಿಕಾರಿ) ಯವರನ್ನು ವಿಚಾರಣೆ ಮಾಡಿ ಎಕ್ಸಿಬಿಟ್ ಪಿ-1 ರಿಂದ ಪಿ-3 ನ್ನು ದಾಸ್ತಾವೇಜುಗಳಾಗಿ ಗುರುತಿಸಿರುತ್ತಾರೆ. ಆರೋಪಿತ ಸರ್ಕಾರಿ ಅಧಿಕಾರಿಯು ಎಕ್ಸಿಬಿಟ್ ಡಿ-1 ರಿಂದ ಡಿ-7ನ್ನು ದಾಸ್ತಾವೇಜುಗಳಾಗಿ ಗುರುತಿಸಿರುತ್ತಾರೆ. ಆರೋಪಿತ ಸರ್ಕಾರಿ ಅಧಿಕಾರಿಯು ತನ್ನನ್ನು ತಾನು ಪರೀಕ್ಷಿಸಿಕೊಂಡಿರುವುದಿಲ್ಲ. ಯಾವುದೇ ಸಾಕ್ಷಿ ಹಾಜರುಪಡಿಸಿರುವುದಿಲ್ಲ. ಕರ್ನಾಟಕ ಸರ್ಕಾರ ಸೇವಾ ನಿಯಮ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11(18) ರಡಿಯಲ್ಲಿ ವಿಚಾರಣಾಧಿಕಾರಿಯವರು ತಮ್ಮ ಇಲಾಖಾ ವಿಚಾರಣೆಯಲ್ಲಿ ಆರೋಪಿತ ಸರ್ಕಾರಿ ಅಧಿಕಾರಿಯ ಮೇಲೆ ಮಾಡಲಾಗಿರುವ 2 ಆರೋಪಗಳೂ ಸಾಬೀತಾಗಿಲ್ಲವೆಂದು ಆದರೆ ಕರ್ತವ್ಯ ನಿರ್ಲಕ್ಷ್ಯೆ ಮಾಡಿರುವುದು ಸಾಬೀತಾಗಿದೆ ಎಂದು ವರದಿ ಮಾಡಿರುತ್ತಾರೆ. ನೊಂದ ಬಾಲಕಿಯು ನ್ಯಾಯಾಲಯದಲ್ಲಿ ಹಾಜರಾಗಿದ್ದರೂ ನೊಂದ ಬಾಲಕಿಗೆ ವಿಚಾರಣೆ ಮಾಡಿರುವುದಿಲ್ಲ ಮತ್ತು ನೊಂದ ಬಾಲಕಿಗೆ ಅಭಿಯೋಗದ ಪರವಾಗಿ ಸಾಕ್ಷಿ ಎಂದು ಹೆಸರಿಸಿರುವುದಿಲ್ಲ ಮತ್ತು ನೊಂದ (ವಿಕ್ಟಿಮ್) ಬಾಲಕಿಯ ಹೇಳಿಕೆಗಳನ್ನು ದಾಖಲೆ ಮಾಡಿಕೊಳ್ಳಲು ತನಿಖಾಧಿಕಾರಿಗಳಿಗೆ ಸೂಕ್ತ ಸೂಚನೆ ನೀಡದೆ ಕರ್ತವ್ಯ ನಿರ್ಲಕ್ಷ್ಯೆ ಮಾಡಿರುತ್ತಾರೆಂದು ನಿಷ್ಕರ್ಷೆಯಲ್ಲಿ ತಿಳಿಸಿರುತ್ತಾರೆ. ಮೇಲೆ (6) ರಲ್ಲಿ ಓದಲಾಗಿರುವ ದಿನಾಂಕ: 23.12.2003 ರಂದು 2ನೇ ಕಾರಣ ಕೇಳುವ ತಿಳುವಳಿಕೆ ಪತ್ರವನ್ನು ಜಾರಿ ಮಾಡಲಾಗಿದ್ದು ಆರೋಪಿತ ಸರ್ಕಾರಿ ಅಧಿಕಾರಿಯು ಮೇಲೆ 7 ರಲ್ಲಿ ಓದಲಾಗಿರುವ ತಮ್ಮ ಲಿಖಿತ ಹೇಳಿಕೆಯನ್ನು ಸಲ್ಲಿಸಿರುತ್ತಾರೆ. ದಿನಾಂಕ: 13.3.2004ರ ಉತ್ತರದಲ್ಲಿ ಆರೋಪಿತ ಸರ್ಕಾರಿ ಅಧಿಕಾರಿಗಳು ವಿಚಾರಣಾ ವರದಿಯಲ್ಲಿ ದೋಷಾರೋಪಣಗಳು ಸಾಬೀತಾಗಿಲ್ಲವೆಂದು ವರದಿ ಮಾಡಿರುವುದರಿಂದ ದೋಷಾರೋಪಣೆಗಳಿಂದ ಮುಕ್ತಗೊಳಿಸಬೇಕೆಂದು ಕೋರಿರುತ್ತಾರೆ. ಇಲಾಖಾ ವಿಚಾರಣಾ ವರದಿಯಲ್ಲಿ ವಿಚಾರಣಾಧಿಕಾರಿಯವರು ಆರೋಪಿತ ಸರ್ಕಾರಿ ಅಧಿಕಾರಿಗಳು ಪ್ರಕರಣವನ್ನು ನಿರ್ವಹಿಸುವಲ್ಲಿ ನಿರ್ಲಕ್ಷ್ಯ ತೋರಿಸಿರುವ ಆಪಾದನೆ ಸಾಬೀತಾಗಿರುತ್ತದೆ ಎಂದು ನಿಷ್ಕರ್ಷೆ ನೀಡಲಾಗಿದೆ. ವರದಿಯನ್ನು ಮತ್ತು ದಾಖಲೆಗಳನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಒಇ 715 ಪಿಪಿಇ 2005, ಬೆಂಗಳೂರು, ದಿನಾಂಕ: 19ನೇ ಮೇ 2006**

ಶ್ರೀ ಆರ್.ಡಿ. ಶಿರಗುಪ್ಪಿ, ಅಭಿಯೋಗ ಉಪನಿರ್ದೇಶಕರು, ಕರ್ನಾಟಕ ಪೊಲೀಸ್ ಅಕಾಡೆಮಿ, ಮೈಸೂರು ಇವರು ಶಿವಮೊಗ್ಗ ಅಧಿಕ ಜಿಲ್ಲಾ ಸತ್ರ ನ್ಯಾಯಾಲಯದ ಅಧಿಕ ಸರ್ಕಾರಿ ಅಭಿಯೋಜಕರಾಗಿ ಕಾರ್ಯ ನಿರ್ವಹಿಸುತ್ತಿದ್ದಾಗ ಕರ್ತವ್ಯ ನಿರ್ಲಕ್ಷೆ ಮಾಡಿರುತ್ತಾರೆಂದು ಮಾಡಲಾಗಿರುವ ಆರೋಪಗಳು ಸಾಬೀತಾಗಿರುವುದರಿಂದ ಸದರಿ ಆರೋಪಿತ ಅಧಿಕಾರಿಗೆ ಕರ್ನಾಟಕ ಸರ್ಕಾರ ಸೇವಾ ನಿಯಮ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮ 1957ರ ನಿಯಮಾವಳಿ 8(IV) ರ ಅಡಿಯಲ್ಲಿ ಸದರಿ ಅಧಿಕಾರಿಯವರು ಧಾರಣೆ ಮಾಡಿರುವ ಹುದ್ದೆಯ ಕಾಲಿಕ ವೇತನ ಶ್ರೇಣಿ ರೂ.9,580-14,200ರ ಕನಿಷ್ಠ ಹಂತದ ವೇತನ ರೂ.9,580ಕ್ಕೆ ಈ ಆದೇಶವನ್ನು ಹೊರಡಿಸಿದ ದಿನಾಂಕದ ಲಾಗಾಯ್ತು ಇಳಿಸಲಾಗಿದೆ ಮತ್ತು ಈ ದಂಡನೆಯು ಆರೋಪಿತ ಅಧಿಕಾರಿಯವರು ವಯೋನಿವೃತ್ತಿ ಹೊಂದುವವರೆಗೆ ಜಾರಿಯಲ್ಲಿರುತ್ತದೆ.

1) ಈ ದಂಡನೆಯು ಸದರಿ ಆರೋಪಿತ ಅಧಿಕಾರಿಯವರು ವಯೋನಿವೃತ್ತಿ ಹೊಂದುವ ದಿನಾಂಕ: 31.1.2008ರ ವರೆಗೆ ಚಾಲ್ತಿಯಲ್ಲಿರುತ್ತದೆ.

2) ಸದರಿ ಅಧಿಕಾರಿವರಿಗೆ ದಿನಾಂಕ: 1.7.2006, 1.7.2007ರ ವಾರ್ಷಿಕ ವೇತನ ಬಡ್ತಿಗಳನ್ನು ಪಡೆಯಲು ಅರ್ಹರಾಗಿರುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎ. ಕುಲಕರ್ಣಿ**

ಪಿ.ಆರ್. 800

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಕಾ. ಮತ್ತು ಸು. ಮತ್ತು ಅಭಿಯೋಗಗಳು).

## PERSONNEL AND ADMINISTRATIVE REFORMS SECRETARIAT

## OFFICIAL MEMORANDUM

**No. DPAR 215 SAS 2006, Bangalore, Dated: 16th May 2006**

The O.M.No.F.No.1/(2)/2006-B-II(B)166, dated: 29.03.2006 of Govt. of India, Ministry of Finance, Department of Expenditure, New Delhi is hereby republished.

## OFFICIAL MEMORANDUM

**Subject:** Payment of Dearness Allowance to Central Government employees - Revised Rates effective from 1.1.2006.

The undersigned is directed to refer to this Ministry's Office Memorandum No.1(5)/2005-E-II(B)/746, dated: 7th October, 2005 on the subject mentioned above and to state that the President is pleased to decide that the Dearness Allowance payable to Central Government employees shall be enhanced from the existing rate of 21% to 24% with effect from 1st January 2006.

The provisions contained in paras 3, 4 and 5 of this Ministry's O.M.No.1(13)/97-E-II(B), dated: 03.10.1997 shall continue to be applicable while regulating Dearness Allowance under these orders. However, with effect from 1.4.2004, Dearness Allowance will be computed on the basis of Basic Pay, Dearness pay, Stagnation Increment and NPA. Provisions contained in para 3 of this Ministry's O.M.No.1(13)/97-E-II(B), dated: 3.10.1997 therefore stand amended to this extent.

The additional installment of Dearness Allowance payable under these orders shall be paid in cash to all Central Government employees.

The payment of arrears of Dearness Allowance payable under these orders for the months of January and February, 2006, shall not be made before the date of disbursement of salary for March, 2006.

These order shall also apply to the civilian employees paid from the Defence Service Estimates and the expenditure will be chargeable to the releant head of the Defence Services Estimates.

In so far as the persons serving in the Indian Audit and Accounts Department are concerned, these orders issue after consultation with the Comptroller and Auditor General of India.

**N.P.Singh**
Under Secretary to Government of India

By Order and in the name of the Governor of Karnataka,
**K. SUDHAKARA SHETTY**
Under Secretary to Government,
Department of Personnel and Administrative Reforms (Services-1).

PR- 819

## LABOUR SECRETARIAT

**Subject:** Reconstitution of Tripartite Monitoring Committee to monitor the progress of the implementation of the Manisana Wage Board Award for working journalists and non-journalists Newspaper and News Agency employees-issue of orders.

**PREAMBLE:**

The Secretary, Ministry of Labour, Shram Shakthi Bhavan, New Delhi in his D.O.Letter No. V-24011/3/2001-WB dated: 16th February 2001 addressed to the Secretary to Government, Labour Department issued instructions to constitute a Tripartite Monitoring Committee to oversee the implementations of the recommendations of the Manisana Wage Board. Accordingly the Government Vide Order No. LD 54 LET 2003, Bangalore dated: 7.4.2003 has constituted a Tripartite Monitoring Committee.

The Economic Adviser, Ministry of Labour and Employment, Government of India, New Delhi has convened a meeting on 11.3.2006 in Bangalore to review the implementation of recommendations of Manisana Wage Board During the discussions, has suggested to reconstitute the Tripartite Monitoring Committee with Hon'ble Minister for Labour and Minority Welfare, Government of Karnataka as the Chairman of the Committee. Hence the following order.

**GOVERNMENT ORDER No. LD 65 LET 2006, Bangalore, Dated: 4th May 2006**

Government of Karnataka hereby reconstitute the State Level Tripartite Monitoring Committee with immediate effect under the Chairmanship of the Hon'ble Minister for Labour and Minority Welfare,

Government of Karnataka, Vidhana Soudha, Bangalore with the following official and non-official members.

| | | |
|---|---|---|
| 1 | The Hon'ble Minister for Labour & Minority Welfare, Government of Karnataka | Chairman |
| 2 | The Principal Secretary to Government of Karnataka Labour Department, M.S.Building, Bangalore | Member |
| 3 | The Labour Commissioner, Karmika Bhavan, Bangalore | Member Secretary |
| **EMPLOYERS REPRESENTATIVES** | | |
| 1 | The Managing Director or his nominee 'Indian Express', Bangalore | Member |
| 2 | The Managing Director or his nominee The 'Hindu' Bangalore | Member |
| 3 | The Managing Director or his nominee The 'Times of India' Bangalore | Member |
| 4 | The Managing Director or his nominee the Printers (Mysore) Ltd., 75, M.G.Road, Bangalore-1 | Member |
| **EMPLOYEES REPRESENTATIVES** | | |
| 1 | The President/General Secretary, The Bangalore News Paper Employees Union, C/o Deccan Herald, No.75, M.G.Road, Bangalore-1. | Member |
| 2 | Sri S.V. Jayasheela Rao, Ex-Wage Board Bachawat Award Board, Bachawat Committee Member, Press Council, Ex-President IFWJ, No.431, 5th Cross, 7th Block, West, jayanagar, Bangalore-82. | Member |

By Order and in the name of the Governor of Karnataka,

**VIMALA KUMARI**

P.R. 803

Under Secretary to Government, Labour Department.

**ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಸಚಿವಾಲಯ**

**ವಿಷಯ:** ಶ್ರೀ ಸಿ.ಡಿ. ಹಾದಿಕಾರ, ಶಿಶು ಅಭಿವೃದ್ಧಿ ಯೋಜನಾಧಿಕಾರಿ ಯಲಬುರ್ಗಾ, ಇವರ ಅಮಾನತ್ತನ್ನು ತೆರವುಗೊಳಿಸಿ ಸ್ಥಳ ನಿಯುಕ್ತಿಗೊಳಿಸುವ ಕುರಿತು.

**ಓದಲಾಗಿದೆ:**
1) ಸರ್ಕಾರಿ ಆದೇಶ ಸಂಖ್ಯೆ: ಮಮಇ 55 ಎಸ್‌ಜೆಡಿ 2005, ದಿನಾಂಕ: 3.3.2005.
2) ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ ಇವರ ಪತ್ರ ಸಂಖ್ಯೆ: ನಿಸಿಶಿಪ ಪ:3:2005-06, ದಿನಾಂಕ: 11.07.2005.
3) ಆಯುಕ್ತರು, ಮಹಿಳೆಯರ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಬೆಂಗಳೂರು ಇವರ ಅ.ಸ.ಪತ್ರ ಸಂಖ್ಯೆ: ನಿಸಿಶಿಪ:3: 2005-2006, ದಿನಾಂಕ: 3.1.2006.

**ಪ್ರಸ್ತಾವನೆ:**

ಮೇಲೆ (1) ರಲ್ಲಿ ಓದಲಾದ ಆದೇಶದಲ್ಲಿ ಶ್ರೀ ಸಿ.ಡಿ. ಹಾದಿಕಾರ, ಶಿಶು ಅಭಿವೃದ್ಧಿ ಯೋಜನಾಧಿಕಾರಿ, ಯಲಬುರ್ಗಾ, ಇವರನ್ನು ಕೆಲವು ಆಪಾದನೆಗಳ ವಿಚಾರಣೆಯ ಸಂಬಂಧದಲ್ಲಿ ಇಲಾಖಾ ವಿಚಾರಣೆ ಬಾಕಿ ಇರಿಸಿ, ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು, 1957ರ ನಿಯಮ 10(1)(ಎ) ರನ್ವಯ ಕೂಡಲೇ ಜಾರಿಗೆ ಬರುವಂತೆ ಸೇವೆಯಿಂದ ಅಮಾನತ್ತಿನಲ್ಲಿ ಇರಿಸಲಾಗಿತ್ತು.

ಮೇಲೆ (2) ಮತ್ತು (3) ರಲ್ಲಿ ಓದಲಾದ ಪತ್ರಗಳಲ್ಲಿ ಪ್ರಸ್ತುತ ಪಡೆಯುತ್ತಿರುವ ಜೀವನಾಂಶ ಭತ್ಯೆ ಮಕ್ಕಳ ವಿದ್ಯಾಭ್ಯಾಸ ಹಾಗೂ ಜೀವನ ನಿರ್ವಹಣೆಗೆ ತುಂಬಾ ತೊಂದರೆಯಾಗಿರುವುದರಿಂದ ಸೇವೆಯಲ್ಲಿ ಪುನರ್ ಸ್ಥಾಪಿಸುವಂತೆ ಸದರಿ ಅಧಿಕಾರಿಯು ಕೋರಿದ್ದು, ಈಗಾಗಲೇ ಅಮಾನತ್ತಿನ ಅವಧಿಯು 3 ತಿಂಗಳಿಗಿಂತ ಹೆಚ್ಚಾಗಿರುವುದರಿಂದ ಸದರಿ ಅಧಿಕಾರಿಯ ವಿರುದ್ಧ ಇಲಾಖಾ ವಿಚಾರಣೆ ಪ್ರಾರಂಭವಾಗಿ, ವಿಚಾರಣಾಧಿಕಾರಿ ಮತ್ತು ಮಂಡನಾಧಿಕಾರಿಯನ್ನು ನೇಮಿಸಲಾಗಿದ್ದು, ಸದರಿ ಅಧಿಕಾರಿಯನ್ನು ಸೇವೆಯಲ್ಲಿ ಪುನರ್ ಸ್ಥಾಪಿಸುವಂತೆ ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ ಇವರು ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಗೆ ಸೂಚಿಸಿದಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಮಮಇ 55 ಎಸ್‌ಜೆಡಿ 2005, ಬೆಂಗಳೂರು, ದಿನಾಂಕ: 17ನೇ ಮೇ 2006**

ಪ್ರಸ್ತುತ ಅಮಾನತ್ತಿನಲ್ಲಿರುವ ಶ್ರೀ ಸಿ.ಡಿ. ಹಾದಿಕಾರ, ಶಿಶು ಅಭಿವೃದ್ಧಿ ಯೋಜನಾಧಿಕಾರಿ, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಯಲಬುರ್ಗಾ ಇವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಸೇವೆಯಲ್ಲಿ ಪುನರ್ ಸ್ಥಾಪಿಸಿ, ಹೊಸಪೇಟೆ, ಬಳ್ಳಾರಿ ಜಿಲ್ಲೆ ಇಲ್ಲಿ ಖಾಲಿ ಇರುವ ಶಿಶು ಅಭಿವೃದ್ಧಿ ಯೋಜನಾಧಿಕಾರಿ ಹುದ್ದೆಗೆ ಸ್ಥಳ ನಿಯುಕ್ತಿಗೊಳಿಸಿ ನೇಮಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ವಿ. ಶಿವಕುಮಾರ್**

ಪಿ.ಆರ್. 810

ಸರ್ಕಾರದ ಅಧೀನ ಕಾರ್ಯದರ್ಶಿ-2,
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ.

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ವಾರ್ತಾ, ಪ್ರವಾಸೋದ್ಯಮ ಮತ್ತು ಯುವಜನಸೇವಾ ಇಲಾಖೆ ಹಾಗೂ ಕನ್ನಡ ಮತ್ತು ಸಂಸ್ಕೃತಿ ಇಲಾಖೆಗಳನ್ನು ಪುನರ್ ಸಂಘಟಿಸುವ ಬಗ್ಗೆ.

**ಓದಲಾಗಿದೆ:** ಮಾನ್ಯ ಮುಖ್ಯಮಂತ್ರಿಯವರ ದಿನಾಂಕ: 3.5.2006ರ ನಡವಳಿ.

**ಪ್ರಸ್ತಾವನೆ:**

ಕರ್ನಾಟಕ ಸರ್ಕಾರದ ಸಚಿವಾಲಯದಲ್ಲಿ ವಾರ್ತಾ, ಪ್ರವಾಸೋದ್ಯಮ ಮತ್ತು ಯುವಜನಸೇವಾ ಇಲಾಖೆ ಹಾಗೂ ಕನ್ನಡ ಮತ್ತು ಸಂಸ್ಕೃತಿ ಇಲಾಖೆಗಳು ಪ್ರತ್ಯೇಕವಾಗಿ ಕಾರ್ಯ ನಿರ್ವಹಿಸುತ್ತಿವೆ. ಈಗ ರಾಜ್ಯದಲ್ಲಿ ಸುವರ್ಣ ಕರ್ನಾಟಕ ಕಾರ್ಯಕ್ರಮ ಆಚರಿಸುತ್ತಿರುವುದರಿಂದ ಈ ಎರಡು ಇಲಾಖೆಗಳನ್ನು ಪುನರ್ ಸಂಘಟಿಸುವುದನ್ನು ಪರಿಶೀಲಿಸಲಾಗಿದೆ. ಕರ್ನಾಟಕ ಸರ್ಕಾರ (ವ್ಯವಹಾರ ಹಂಚಿಕೆ) ನಿಯಮಾವಳಿ 1977 - ಈ ನಿಯಮಾವಳಿಗೆ ಅವಶ್ಯವಿರುವ ತಿದ್ದುಪಡಿ ಹೊರಡಿಸುವುದನ್ನು ಕಾದಿರಿಸಿ ವಾರ್ತಾ, ಪ್ರವಾಸೋದ್ಯಮ ಮತ್ತು ಯುವಜನಸೇವಾ ಇಲಾಖೆಯನ್ನು ಹಾಗೂ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯನ್ನು ಈ ಕೆಳಗಿನಂತೆ ಪುನರ್ ಸಂಘಟಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 42 ಸಸಿವಿ 2006, ಬೆಂಗಳೂರು, ದಿನಾಂಕ: 18ನೇ ಮೇ 2006**

ಕನ್ನಡ ಮತ್ತು ಸಂಸ್ಕೃತಿ ಇಲಾಖೆಯನ್ನು ತಕ್ಷಣದಿಂದ ಜಾರಿಗೆ ಬರುವಂತೆ ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಹಾಗೂ ಪ್ರವಾಸೋದ್ಯಮ ಇಲಾಖೆ ಎಂದು ಪುನರ್ ಪದನಾಮೀಕರಿಸಲಾಗಿದೆ. ಈ ಇಲಾಖೆಗೆ ಈ ಕೆಳಗಿನ ವಿಷಯಗಳನ್ನು ಹಂಚಲಾಗಿದೆ.

1. ಕರ್ನಾಟಕ ಸರ್ಕಾರ (ವ್ಯವಹಾರಗಳ ಹಂಚಿಕೆ) ನಿಯಮಾವಳಿ 1977ರ ಷೆಡ್ಯೂಲ್ XIXA ಪ್ರಕಾರ ಹಂಚಲಾದ ವಿಷಯಗಳು
2. ಕರ್ನಾಟಕ ಸರ್ಕಾರ (ವ್ಯವಹಾರ ಹಂಚಿಕೆ) ನಿಯಮಾವಳಿ 1997ರ ಷೆಡ್ಯೂಲ್ XIX ರನ್ವಯ ಹಿಂದಿನ ವಾರ್ತಾ, ಪ್ರವಾಸೋದ್ಯಮ ಮತ್ತು ಯುವಜನ ಸೇವಾ ಇಲಾಖೆಯು ನಿರ್ವಹಿಸುತ್ತಿದ್ದ A - "ವಾರ್ತಾ ಇಲಾಖೆ" ಹಾಗೂ B - "ಪ್ರವಾಸೋದ್ಯಮ" ವಿಷಯಗಳು.

ಹಾಲಿ ವಾರ್ತಾ ಪ್ರವಾಸೋದ್ಯಮ ಮತ್ತು ಯುವಜನ ಸೇವಾ ಇಲಾಖೆಯನ್ನು ತಕ್ಷಣದಿಂದ ಜಾರಿಗೆ ಬರುವಂತೆ ಯುವಜನ ಸೇವಾ ಇಲಾಖೆ ಎಂದು ಪುನರ್ ಪದನಾಮೀಕರಿಸಲಾಗಿದೆ. ಪುನರ್ ಸಂಘಟಿತ ಯುವಜನ ಸೇವಾ ಇಲಾಖೆಯು ಕರ್ನಾಟಕ ಸರ್ಕಾರ (ವ್ಯವಹಾರ ಹಂಚಿಕೆ) ನಿಯಮಾವಳಿ 1977ರ ಷೆಡ್ಯೂಲ್ XIX ರಲ್ಲಿ ವಿವರಿಸಿದ "ವಾರ್ತಾ ಇಲಾಖೆ" ಮತ್ತು "ಪ್ರವಾಸೋದ್ಯಮ" ವಿಷಯ ಹೊರತುಪಡಿಸಿ ಷೆಡ್ಯೂಲ್ XIX ರಲ್ಲಿ ನಮೂದಿಸಿದ ಇತರ ವಿಷಯಗಳನ್ನು ನಿರ್ವಹಿಸತಕ್ಕದ್ದು.

ಮೇಲಿನಂತೆ ಈ 2 ಇಲಾಖೆಗಳನ್ನು ಪುನರ್ ಸಂಘಟಿಸಿದ ಅನ್ವಯ ಹಿಂದಿನ ವಾರ್ತಾ, ಪ್ರವಾಸೋದ್ಯಮ ಮತ್ತು ಯುವಜನ ಸೇವಾ ಇಲಾಖೆಯಿಂದ (ಈಗ ಯುವಜನ ಸೇವಾ ಇಲಾಖೆ) ಈ ಕೆಳಗಿನ ಹುದ್ದೆಗಳನ್ನು ಹೊಸದಾಗಿ ಪುನರ್ ಸಂಘಟಿಸಿದ ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಹಾಗೂ ಪ್ರವಾಸೋದ್ಯಮ ಸಚಿವಾಲಯಕ್ಕೆ ವರ್ಗಾಯಿಸಲಾಗಿದೆ.

1. ಅಧೀನ ಕಾರ್ಯದರ್ಶಿ-1 (ವಾರ್ತಾ ಮತ್ತು ಪ್ರವಾಸೋದ್ಯಮ)
2. ವಾರ್ತಾ ಶಾಖೆ
3. ಪ್ರವಾಸೋದ್ಯಮ ಶಾಖೆ

ಪುನರ್ ಸಂಘಟಿಸಲಾದ ಯುವಜನ ಸೇವಾ ಇಲಾಖೆಯಲ್ಲಿ ಕೆಳಕಂಡ ಹುದ್ದೆ : ಶಾಖೆಗಳು ಚಾಲ್ತಿಯಲ್ಲಿರುತ್ತವೆ.

| | | |
|---|---|---|
| 1 | ಕಾರ್ಯದರ್ಶಿ / ಪ್ರಧಾನ ಕಾರ್ಯದರ್ಶಿ | 1 |
| 2 | ಉಪ ಕಾರ್ಯದರ್ಶಿ | 1 |
| 3 | ಅಧೀನ ಕಾರ್ಯದರ್ಶಿ (ಯುವಜನಸೇವೆ) | 1 |
| 4 | ಪೀಠಾಧಿಕಾರಿ (ಯುವಜನ ಸೇವೆ) | 1 |
| 4 | ಸ್ವೀಕೃತಿ ಮತ್ತು ರವಾನೆ ಶಾಖೆ | |

ಹಾಲಿ ಆಂತರಿಕ ಆರ್ಥಿಕ ಸಲಹೆಗಾರರು, ವಾರ್ತಾ, ಪ್ರವಾಸೋದ್ಯಮ ಮತ್ತು ಯುವಜನಸೇವಾ ಇಲಾಖೆ ಹಾಗೂ ಕಂದಾಯ ಇಲಾಖೆ, ಇವರ ಪದನಾಮವನ್ನು ಆಂತರಿಕ ಆರ್ಥಿಕ ಸಲಹೆಗಾರರು, ಯುವಜನ ಸೇವಾ ಇಲಾಖೆ ಹಾಗೂ ಕಂದಾಯ ಇಲಾಖೆ ಎಂದು ಪುನರ್ ಪದನಾಮೀಕರಿಸಲಾಗಿದೆ. ಆಂತರಿಕ ಆರ್ಥಿಕ ಸಲಹೆಗಾರರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಹಾಗೂ ಶಿಕ್ಷಣ ಇಲಾಖೆ, ಇವರ ಪದನಾಮವನ್ನು ಆಂತರಿಕ ಆರ್ಥಿಕ ಸಲಹೆಗಾರರು, ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಹಾಗೂ ಪ್ರವಾಸೋದ್ಯಮ ಇಲಾಖೆ ಹಾಗೂ ಶಿಕ್ಷಣ ಇಲಾಖೆ ಎಂದು ಪುನರ್ ಪದನಾಮೀಕರಿಸಲಾಗಿದೆ.

ಕರ್ನಾಟಕ ಸರ್ಕಾರ (ವ್ಯವಹಾರ ಹಂಚಿಕೆ) ನಿಯಮಾವಳಿ, 1977 ಇವುಗಳಿಗೆ ಅವಶ್ಯವಿರುವ ಔಪಚಾರಿಕ ತಿದ್ದುಪಡಿಗಳನ್ನು ಪ್ರತ್ಯೇಕವಾಗಿ ಹೊರಡಿಸಲಾಗುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಯು.ಪಿ. ಪ್ರಭು**

ಪಿ.ಆರ್. 816

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-2).

## ಕಾನೂನು ನ್ಯಾಯ ಮತ್ತು ಮಾನವ ಹಕ್ಕುಗಳ ಸಚಿವಾಲಯ

**ವಿಷಯ:** ಶ್ರೀ ಮೊಹಮ್ಮದ್ ಶಹನಾವಾಜ್ ವಕೀಲರು, ಹಿರಿಯೂರು ಇವರನ್ನು ಹಿರಿಯೂರು ಕಂದಾಯ ತಾಲ್ಲೂಕಿನ ನೋಟರಿಯನ್ನಾಗಿ ನೇಮಿಸುವ ಕುರಿತು.

**ಓದಲಾಗಿದೆ:**
1) ಸರ್ಕಾರಿ ಆದೇಶ ಸಂಖ್ಯೆ: ಲಾ 30 ಎಲ್‌ಸಿಎಲ್ 04, ದಿನಾಂಕ: 04.08.2005.
2) ಸರ್ಕಾರಿ ಸಮಸಂಖ್ಯೆ ಪತ್ರ ದಿನಾಂಕ: 31.08.2005.
3) ಜಿಲ್ಲಾ ಮತ್ತು ಸತ್ರನ್ಯಾಯಾಧೀಶರು, ಚಿತ್ರದುರ್ಗ ಇವರ ಪತ್ರ 8996/2005, ದಿನಾಂಕ: 7/8.11.2005.

**ಪ್ರಸ್ತಾವನೆ:**

ಮೇಲೆ (1) ರಲ್ಲಿ ಓದಲಾದ ದಿನಾಂಕ: 04.08.2005ರ ಆದೇಶದಲ್ಲಿ ಚಿತ್ರದುರ್ಗ ಜಿಲ್ಲೆಯ ಹಿರಿಯೂರು ಕಂದಾಯ ತಾಲ್ಲೂಕಿಗೆ ಒಂದು ನೋಟರಿ ಹುದ್ದೆಯನ್ನು ಹೆಚ್ಚುವರಿಯಾಗಿ ಸೃಜಿಸಲಾಗಿದೆ ಸದರಿ ಹುದ್ದೆಯ ನೇಮಕಾತಿಗೆ ಪ್ರಸ್ತಾವನೆ ಸಲ್ಲಿಸುವಂತೆ ಮೇಲೆ (2) ರಲ್ಲಿ ಓದಲಾದ ದಿನಾಂಕ: 31.08.2005ರ ಪತ್ರದಲ್ಲಿ ಕೋರಲಾಗಿತ್ತು. ಆ ಮೇರೆಗೆ ಮೇಲೆ (3) ರಲ್ಲಿ ಓದಲಾದ ದಿನಾಂಕ: 7/8.11.2005ರ ಪತ್ರದಲ್ಲಿ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಚಿತ್ರದುರ್ಗ ಇವರು ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಸದರಿ ಪ್ರಸ್ತಾವನೆ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಲಾ 30 ಎಲ್‌ಸಿಎಲ್ 2004, ಬೆಂಗಳೂರು, ದಿನಾಂಕ: 11ನೇ ಮೇ 2006**

ನೋಟರಿ ನಿಯಮಗಳ (1956) ನಿಯಮ 8(1) ರಲ್ಲಿ ಪ್ರದತ್ತವಾಗಿರುವ ಅಧಿಕಾರ ಚಲಾಯಿಸಿ, ನೋಟರಿ ಅಧಿನಿಯಮ (1952) ಹಾಗೂ ಅದರ ಅಡಿಯಲ್ಲಿ ರಚಿಸಲಾಗಿರುವ ನಿಯಮಗಳ ರೀತ್ಯ ವೃತ್ತಿ ಪ್ರಮಾಣ ಪತ್ರ ನೀಡಲಾದ ದಿನಾಂಕದಿಂದ ಐದು ವರ್ಷಗಳ ಅವಧಿಗೆ ಶ್ರೀ ಹೆಚ್.ಮೊಹಮ್ಮದ್ ಶಹನಾವಾಜ್ ವಕೀಲರು ನೂರ್ ಕಾಂಪ್ಲೆಕ್ಸ್, ಮೇನ್ ರೋಡ್, ಹಿರಿಯೂರು ಚಿತ್ರದುರ್ಗ ಜಿಲ್ಲೆ ಇವರನ್ನು ಹಿರಿಯೂರು ಕಂದಾಯ ತಾಲ್ಲೂಕಿನ ನೋಟರಿಯನ್ನಾಗಿ ನೇಮಿಸಿದೆ.

ಸದರಿ ವಕೀಲರು ಲೆಕ್ಕ ಶೀರ್ಷಿಕೆ 0070-ಇತರೆ ಆಡಳಿತಾತ್ಮಕ ಸೇವೆಗಳು-01-ನ್ಯಾಯ ಪರಿಪಾಲನೆ-501-0-ಇತರೆ ಸ್ವೀಕೃತಿಗಳು-06 ಇತರೆ ಬಾಬ್ತುಗಳಿಗೆ (0070-01-501-0-06) ಸರ್ಕಾರಿ ಖಜಾನೆಯಲ್ಲಿ ನಿಗದಿಪಡಿಸಲಾದ ರೂ.1000 (ಒಂದು ಸಾವಿರಗಳು ಮಾತ್ರ) ಶುಲ್ಕವನ್ನು ಜಮಾ ಮಾಡಿ ಆ ಬಗೆಗಿನ ಮೂಲ ಚಲನ್ ಮತ್ತು ಹುಟ್ಟಿದ ದಿನಾಂಕವನ್ನು ದೃಢೀಕರಿಸಬಲ್ಲ ದಾಖಲೆಯನ್ನು ಹಾಜರುಪಡಿಸಿದ ನಂತರ ಸದರಿಯವರಿಗೆ ವೃತ್ತಿಪ್ರಮಾಣ ಪತ್ರ ನೀಡಲಾಗುವುದು.

ತದನಂತರ ಶ್ರೀಯುತರ ಹೆಸರನ್ನು ನೋಟರಿ ಅಧಿನಿಯಮ (1952)ರ ಕಲಂ ಕಾಯ್ದೆಯ ಅಧಿನಿಯಮ 4ನೇ ಪ್ರಕರಣದಡಿ ಸರ್ಕಾರ ನಿರ್ವಹಿಸುತ್ತಿರುವ ರಿಜಿಸ್ಟರ್‌ನಲ್ಲಿ ನಮೂದಿಸಲಾಗುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಶಕುಂತಲ ಹೆಚ್.ಆರ್.**
ಸರ್ಕಾರದ ಅಧೀನ ಕಾರ್ಯದರ್ಶಿ (ಆಡಳಿತ-2),
ಕಾನೂನು ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ.

ಪಿ.ಆರ್. 801

**ವಿಷಯ:** ಶ್ರೀ ತಮ್ಮಣ್ಣ ಸಿದ್ರಾಮ್ ಸೊಡ್ಡನವರ್, ವಕೀಲರು, ಹುಕ್ಕೇರಿ ಇವರನ್ನು ಹುಕ್ಕೇರಿ ಕಂದಾಯ ತಾಲ್ಲೂಕಿನ ನೋಟರಿಯನ್ನಾಗಿ ನೇಮಿಸುವ ಕುರಿತು.

**ಓದಲಾಗಿದೆ:**
1) ಸರ್ಕಾರಿ ಆದೇಶ ಸಂಖ್ಯೆ: ಲಾ 209 ಎಲ್‌ಸಿಎಲ್ 05, ದಿನಾಂಕ: 24.12.2005.
2) ಸರ್ಕಾರದ ಪತ್ರಸಂಖ್ಯೆ: ಲಾ 209 ಎಲ್‌ಸಿಎಲ್ 05, ದಿನಾಂಕ: 31.12.2005.
3) ಪ್ರಧಾನ ಜಿಲ್ಲಾ ಮತ್ತು ಸತ್ರನ್ಯಾಯಾಧೀಶರು, ಬೆಳಗಾಂ ಇವರ ಪತ್ರ: 2691/2006, ದಿನಾಂಕ: 08.03.2006.

**ಪ್ರಸ್ತಾವನೆ:**

ಮೇಲೆ (1) ರಲ್ಲಿ ಓದಲಾದ ದಿನಾಂಕ: 24.12.2005ರ ಆದೇಶದಲ್ಲಿ ಬೆಳಗಾಂ ಜಿಲ್ಲೆ, ಹುಕ್ಕೇರಿ ಕಂದಾಯ ತಾಲ್ಲೂಕಿಗೆ ಒಂದು ನೋಟರಿ ಹುದ್ದೆಯನ್ನು ಸೃಜಿಸಲಾಗಿದೆ. ಸದರಿ ಹುದ್ದೆಯ ನೇಮಕಾತಿಗೆ ಪ್ರಸ್ತಾವನೆ ಸಲ್ಲಿಸುವಂತೆ ಮೇಲೆ (2) ರಲ್ಲಿ ಓದಲಾದ ದಿನಾಂಕ: 31.12.2005ರ ಪತ್ರದಲ್ಲಿ ಕೋರಲಾಗಿತ್ತು. ಆ ಮೇರೆಗೆ ಮೇಲೆ (3) ರಲ್ಲಿ ಓದಲಾದ ದಿನಾಂಕ: 08.03.2006ರ ಪತ್ರದಲ್ಲಿ ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಬೆಳಗಾಂ ಇವರು ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಸದರಿ ಪ್ರಸ್ತಾವನೆ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಲಾ 142 ಎಲ್‌ಸಿಎಲ್ 2005, ಬೆಂಗಳೂರು, ದಿನಾಂಕ: 12ನೇ ಮೇ 2006**

ನೋಟರಿ ನಿಯಮಗಳ (1956) ನಿಯಮ 8(1) ರಲ್ಲಿ ಪ್ರದತ್ತವಾಗಿರುವ ಅಧಿಕಾರ ಚಲಾಯಿಸಿ, ನೋಟರಿ ಅಧಿನಿಯಮ (1952) ಹಾಗೂ ಅದರ ಅಡಿಯಲ್ಲಿ ರಚಿಸಲಾಗಿರುವ ನಿಯಮಗಳ ರೀತ್ಯ ಶ್ರೀ ತಮ್ಮಣ್ಣ ಸಿದ್ರಾಮ್ ಸೊಡ್ಡನವರ್, ವಕೀಲರು, ಯಲ್ಮುನ್ನೊಲ್, ಹುಕ್ಕೇರಿ ತಾಲ್ಲೂಕು, ಬೆಳಗಾಂ ಜಿಲ್ಲೆ ಇವರನ್ನು ವೃತ್ತಿ ಪ್ರಮಾಣ ಪತ್ರ ನೀಡಲಾದ ದಿನಾಂಕದಿಂದ ಐದು ವರ್ಷಗಳ ಅವಧಿಗೆ ಹುಕ್ಕೇರಿ ಕಂದಾಯ ತಾಲ್ಲೂಕಿನ ನೋಟರಿಯನ್ನಾಗಿ ನೇಮಿಸಿದೆ.

ಸದರಿ ವಕೀಲರು ಲೆಕ್ಕ ಶೀರ್ಷಿಕೆ 0070-ಇತರೆ ಆಡಳಿತಾತ್ಮಕ ಸೇವೆಗಳು-01-ನ್ಯಾಯ ಪರಿಪಾಲನೆ-501-0-ಇತರೆ ಸ್ವೀಕೃತಿಗಳು-06 ಇತರೆ ಬಾಬ್ತುಗಳಿಗೆ (0070-01-501-0-06) ಸರ್ಕಾರಿ ಖಜಾನೆಯಲ್ಲಿ ನಿಗದಿಪಡಿಸಲಾದ ರೂ.1000 (ಒಂದು ಸಾವಿರಗಳು ಮಾತ್ರ) ಶುಲ್ಕವನ್ನು ಜಮಾ ಮಾಡಿ ಆ ಬಗೆಗಿನ ಮೂಲ ಚಲನ್ ಮತ್ತು ಹುಟ್ಟಿದ ದಿನಾಂಕವನ್ನು ದೃಢೀಕರಿಸಬಲ್ಲ ದಾಖಲೆಯನ್ನು ಹಾಜರುಪಡಿಸಿದ ನಂತರ ಸದರಿಯವರಿಗೆ ವೃತ್ತಿಪ್ರಮಾಣ ಪತ್ರ ನೀಡಲಾಗುವುದು.

ತದನಂತರ ಶ್ರೀಯುತರ ಹೆಸರನ್ನು ನೋಟರಿ ಅಧಿನಿಯಮ (1952)ರ ಕಲಂ ಕಾಯ್ದೆಯ ಅಧಿನಿಯಮ 4ನೇ ಪ್ರಕರಣದಡಿ ಸರ್ಕಾರ ನಿರ್ವಹಿಸುತ್ತಿರುವ ರಿಜಿಸ್ಟರ್‌ನಲ್ಲಿ ನಮೂದಿಸಲಾಗುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಶಕುಂತಲ ಹೆಚ್.ಆರ್.**
ಸರ್ಕಾರದ ಅಧೀನ ಕಾರ್ಯದರ್ಶಿ (ಆಡಳಿತ-2),
ಕಾನೂನು ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ.

ಪಿ.ಆರ್. 802

**ವಿಷಯ:** ಶ್ರೀ ಶಿವಪುತ್ರ ಪುಟ್ಟಪ್ಪ ಸಮ್ಮಸಗಿ, ವಕೀಲರು, ಮುಂಡಗೋಡು ಇವರನ್ನು ಮುಂಡಗೋಡು ಕಂದಾಯ ತಾಲ್ಲೂಕಿನ ನೋಟರಿಯನ್ನಾಗಿ ನೇಮಿಸುವ ಕುರಿತು.

**ಓದಲಾಗಿದೆ:**
1) ಸರ್ಕಾರಿ ಆದೇಶ ಸಂಖ್ಯೆ: ಲಾ 08 ಎಲ್‌ಸಿಎಲ್ 97, ದಿನಾಂಕ: 31.01.1998.
2) ಸರ್ಕಾರದ ಪತ್ರ ಸಂಖ್ಯೆ: ಲಾ 10 ಎಲ್‌ಸಿಎಲ್ 04, ದಿನಾಂಕ: 07.02.2005.
3) ಜಿಲ್ಲಾ ಮತ್ತು ಸತ್ರನ್ಯಾಯಾಧೀಶರು, ಉ.ಕನ್ನಡ-ಕಾರವಾರ ಇವರ ಪತ್ರ: ADM-II/3580/2005, ದಿನಾಂಕ: 08/12.07.2005.

**ಪ್ರಸ್ತಾವನೆ:**

ಮೇಲೆ (1) ರಲ್ಲಿ ಓದಲಾದ ದಿನಾಂಕ: 31.01.1998ರ ಆದೇಶದಲ್ಲಿ ಉತ್ತರ ಕನ್ನಡ ಜಿಲ್ಲೆ, ಮುಂಡಗೋಡು ಕಂದಾಯ ತಾಲ್ಲೂಕಿಗೆ ಒಂದು ನೋಟರಿ ಹುದ್ದೆಯನ್ನು ಸೃಜಿಸಲಾಗಿದೆ. ಸದರಿ ಹುದ್ದೆಯ ನೇಮಕಾತಿಗೆ ಪ್ರಸ್ತಾವನೆ ಸಲ್ಲಿಸುವಂತೆ ಮೇಲೆ (2) ರಲ್ಲಿ ಓದಲಾದ ದಿನಾಂಕ: 07.02.2005ರ ಪತ್ರದಲ್ಲಿ ಕೋರಲಾಗಿತ್ತು. ಆ ಮೇರೆಗೆ ಮೇಲೆ (3) ರಲ್ಲಿ ಓದಲಾದ ದಿನಾಂಕ: 08/12.07.2005ರ ಪತ್ರದಲ್ಲಿ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಉತ್ತರ ಕನ್ನಡ ಜಿಲ್ಲೆ ಇವರು ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಸದರಿ ಪ್ರಸ್ತಾವನೆ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಲಾ 10 ಎಲ್‌ಸಿಎಲ್ 2004, ಬೆಂಗಳೂರು, ದಿನಾಂಕ: 18ನೇ ಮೇ 2006**

ನೋಟರಿ ನಿಯಮಗಳ (1956) ನಿಯಮ 8(1) ರಲ್ಲಿ ಪ್ರದತ್ತವಾಗಿರುವ ಅಧಿಕಾರ ಚಲಾಯಿಸಿ, ನೋಟರಿ ಅಧಿನಿಯಮ (1952) ಹಾಗೂ ಅದರ ಅಡಿಯಲ್ಲಿ ರಚಿಸಲಾಗಿರುವ ನಿಯಮಗಳ ರೀತ್ಯ ಶ್ರೀ ಶಿವಪುತ್ರ ಪುಟ್ಟಪ್ಪ ಸಮ್ಮಸಗಿ, ವಕೀಲರು, ಹುಬ್ಬಳ್ಳಿ-ಸಿರಸಿ ರಸ್ತೆ, ಮುಂಡಗೋಡು ಉತ್ತರ ಕನ್ನಡ ಜಿಲ್ಲೆ ಇವರನ್ನು ವೃತ್ತಿ ಪ್ರಮಾಣ ಪತ್ರ ನೀಡಲಾದ ದಿನಾಂಕದಿಂದ ಐದು ವರ್ಷಗಳ ಅವಧಿಗೆ ಮುಂಡಗೋಡು ಕಂದಾಯ ತಾಲ್ಲೂಕಿನ ನೋಟರಿಯನ್ನಾಗಿ ನೇಮಿಸಿದೆ.

ಸದರಿ ವಕೀಲರು ಲೆಕ್ಕ ಶೀರ್ಷಿಕೆ 0070-ಇತರೆ ಆಡಳಿತಾತ್ಮಕ ಸೇವೆಗಳು-01-ನ್ಯಾಯ ಪರಿಪಾಲನೆ-501-0-ಇತರೆ ಸ್ವೀಕೃತಿಗಳು-06 ಇತರೆ ಬಾಬ್ತುಗಳಿಗೆ (0070-01-501-0-06) ಸರ್ಕಾರಿ ಖಜಾನೆಯಲ್ಲಿ ನಿಗದಿಪಡಿಸಲಾದ ರೂ.1000 (ಒಂದು ಸಾವಿರಗಳು ಮಾತ್ರ) ಶುಲ್ಕವನ್ನು ಜಮಾ ಮಾಡಿ ಆ ಬಗೆಗಿನ ಮೂಲ ಚಲನ್ ಮತ್ತು ಹುಟ್ಟಿದ ದಿನಾಂಕವನ್ನು ದೃಢೀಕರಿಸಬಲ್ಲ ದಾಖಲೆಯನ್ನು ಹಾಜರುಪಡಿಸಿದ ನಂತರ ಸದರಿಯವರಿಗೆ ವೃತ್ತಿಪ್ರಮಾಣ ಪತ್ರ ನೀಡಲಾಗುವುದು.

ತದನಂತರ ಶ್ರೀಯುತರ ಹೆಸರನ್ನು ನೋಟರಿ ಅಧಿನಿಯಮ (1952)ರ ಕಲಂ ಕಾಯ್ದೆಯ ಅಧಿನಿಯಮ 4ನೇ ಪ್ರಕರಣದಡಿ ಸರ್ಕಾರ ನಿರ್ವಹಿಸುತ್ತಿರುವ ರಿಜಿಸ್ಟರ್‌ನಲ್ಲಿ ನಮೂದಿಸಲಾಗುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಶಕುಂತಲ ಹೆಚ್.ಆರ್.**
ಸರ್ಕಾರದ ಅಧೀನ ಕಾರ್ಯದರ್ಶಿ (ಆಡಳಿತ-2),
ಕಾನೂನು ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ.

ಪಿ.ಆರ್. 813

**ವಿಷಯ:** ಶ್ರೀಯುತರುಗಳಾದ ಶ್ರೀಹರಿ ಮೋಹನ್‌ರಾವ್ ಪಾರಂಡೆ ಮತ್ತು ರಸೂಲ್ ಸಾಬ್ ಹೆಚ್. ಪೆಂಡಾರ್ ವಕೀಲರುಗಳು, ಬಾಗಲಕೋಟೆ, ಇವರುಗಳನ್ನು ಬಾಗಲಕೋಟೆ ಕಂದಾಯ ತಾಲ್ಲೂಕಿಗೆ ನೋಟರಿಯನ್ನಾಗಿ ನೇಮಿಸುವ ಕುರಿತು.

**ಓದಲಾಗಿದೆ:**
1) ಸರ್ಕಾರಿ ಆದೇಶ ಸಂಖ್ಯೆ: ಲಾ 209 ಎಲ್‌ಸಿಎಲ್ 05, ದಿನಾಂಕ: 24.12.2005.
2) ಸರ್ಕಾರದ ಪತ್ರಸಂಖ್ಯೆ: ಲಾ 209 ಎಲ್‌ಸಿಎಲ್ 05, ದಿನಾಂಕ: 31.12.2005.
3) ಜಿಲ್ಲಾ ಸತ್ರ ನ್ಯಾಯಾಧೀಶರು, ಬಾಗಲಕೋಟೆ ಇವರ ಪತ್ರ: ADMN.806/2006, ದಿನಾಂಕ: 23.02.2006.

**ಪ್ರಸ್ತಾವನೆ:**

ದಿನಾಂಕ: 24.12.2005ರ ಮೇಲೆ ಓದಲಾದ ಕ್ರಮಾಂಕ (1)ರ ಸರ್ಕಾರಿ ಆದೇಶದಲ್ಲಿ ಬಾಗಲಕೋಟೆ ಕಂದಾಯ ತಾಲ್ಲೂಕಿಗೆ ಹೆಚ್ಚುವರಿಯಾಗಿ 2 ನೋಟರಿ ಹುದ್ದೆ ಸೃಜಿಸಲಾಗಿದೆ. ಸದರಿ ಹುದ್ದೆ ನೇಮಕಾತಿಗೆ ಪ್ರಸ್ತಾವನೆ ಸಲ್ಲಿಸುವಂತೆ ಜಿಲ್ಲಾ ಸತ್ರ ನ್ಯಾಯಾಧೀಶರು, ಬಾಗಲಕೋಟೆ ಇವರನ್ನು ಮೇಲೆ ಓದಲಾದ (2) ದಿನಾಂಕ: 31.12.2005ರ ಪತ್ರದಲ್ಲಿ ಕೋರಲಾಗಿತ್ತು.

ಅದರಂತೆ ಮೇಲೆ ಓದಲಾದ (3)ರ ದಿನಾಂಕ: 23.02.2006ರ ಪತ್ರದಲ್ಲಿ 24 ಮೆಮೋರಿಯಲ್ಸ್‌ಗಳನ್ನೊಳಗೊಂಡ ಪ್ರಸ್ತಾವನೆ ಸಲ್ಲಿಸಿರುತ್ತಾರೆ. ಆ ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಲಾ 57 ಎಲ್‌ಸಿಎಲ್ 2006, ಬೆಂಗಳೂರು, ದಿನಾಂಕ: 27ನೇ ಏಪ್ರಿಲ್ 2006**

ನೋಟರಿ ನಿಯಮಗಳ (1956) ನಿಯಮ 8(1) ರಲ್ಲಿ ಪ್ರದತ್ತವಾಗಿರುವ ಅಧಿಕಾರ ಚಲಾಯಿಸಿ, ನೋಟರಿ ಅಧಿನಿಯಮ (1952) ಹಾಗೂ ಅವುಗಳ ಅಡಿಯಲ್ಲಿ ರಚಿಸಲಾಗಿರುವ ನಿಯಮಗಳ ರೀತ್ಯ ಈ ಕೆಳಕಂಡವರುಗಳನ್ನು ವೃತ್ತಿ ಪ್ರಮಾಣ ಪತ್ರ ನೀಡಲಾದ ದಿನಾಂಕದಿಂದ ಐದು ವರ್ಷಗಳ ಅವಧಿಗೆ ಬಾಗಲಕೋಟೆ ಕಂದಾಯ ತಾಲ್ಲೂಕಿನ ನೋಟರಿಗಳನ್ನಾಗಿ ನೇಮಿಸಿದೆ.

1) ಶ್ರೀ ಶ್ರೀಹರಿ ಮೋಹನ್‌ರಾವ್ ಪಾರಂಡೆ, ನಗರೇಶ್ವರ ದೇವಸ್ಥಾನದ ಹಿಂಭಾಗ, ಬಾಗಲಕೋಟೆ.
2) ಶ್ರೀ ರಸೂಲ್ ಸಾಬ್ ಹಜರತ್‌ಸಾಬ್ ಪೆಂಡಾರ್, ವಾರ್ಡ್ ನಂ.2, ಪೆಂಡಾರ್ ಗಲ್ಲಿ, ಬಾಗಲಕೋಟೆ, ಬಾಗಲಕೋಟೆ ಜಿಲ್ಲೆ.

ಸದರಿ ವಕೀಲರು ಲೆಕ್ಕ ಶೀರ್ಷಿಕೆ 0070-ಇತರೆ ಆಡಳಿತಾತ್ಮಕ ಸೇವೆಗಳು-01-ನ್ಯಾಯ ಪರಿಪಾಲನೆ-501-0-ಇತರೆ ಸ್ವೀಕೃತಿಗಳು-06 ಇತರೆ ಬಾಬ್ತುಗಳಿಗೆ (0070-01-501-0-06) ಸರ್ಕಾರಿ ಖಜಾನೆಯಲ್ಲಿ ನಿಗದಿಪಡಿಸಲಾದ ರೂ.1000 (ಒಂದು ಸಾವಿರಗಳು ಮಾತ್ರ) ಶುಲ್ಕವನ್ನು ಜಮಾ ಮಾಡಿ ಆ ಬಗೆಗಿನ ಮೂಲ ಚಲನ್ ಮತ್ತು ಹುಟ್ಟಿದ ದಿನಾಂಕವನ್ನು ದೃಢೀಕರಿಸಬಲ್ಲ ದಾಖಲೆಯನ್ನು ಹಾಜರುಪಡಿಸಿದ ನಂತರ ಸದರಿಯವರಿಗೆ ವೃತ್ತಿಪ್ರಮಾಣ ಪತ್ರ ನೀಡಲಾಗುವುದು.

ವೃತ್ತಿ ಪ್ರಮಾಣ ಪತ್ರ ನೀಡಿದ ನಂತರ ಶ್ರೀಯುತರ ಹೆಸರನ್ನು ನೋಟರಿ ಅಧಿನಿಯಮ (1952)ರ ಕಲಂ ಕಾಯ್ದೆಯ ಅಧಿನಿಯಮ 4ನೇ ಪ್ರಕರಣದಡಿ ಸರ್ಕಾರ ನಿರ್ವಹಿಸುತ್ತಿರುವ ರಿಜಿಸ್ಟರ್‌ನಲ್ಲಿ ನಮೂದಿಸಲಾಗುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಶಕುಂತಲ ಹೆಚ್.ಆರ್.**

ಪಿ.ಆರ್. 814

ಸರ್ಕಾರದ ಅಧೀನ ಕಾರ್ಯದರ್ಶಿ (ಆಡಳಿತ-2),

ಕಾನೂನು ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ (ಆಡಳಿತ-2).

## ಲೋಕೋಪಯೋಗಿ ಸಚಿವಾಲಯ

**ವಿಷಯ:** ಮಂಡ್ಯ ಜಿಲ್ಲೆಯ ಕೆ.ಆರ್.ಪೇಟೆ ತಾಲ್ಲೂಕು ಮತ್ತು ಕೋಲಾರ ಜಿಲ್ಲೆಯ ಚಿಕ್ಕಬಳ್ಳಾಪುರ, ಚಿಂತಾಮಣಿ, ಮತ್ತು ಶ್ರೀನಿವಾಸಪುರ ತಾಲ್ಲೂಕು ಹಾಗೂ ಶಿವಮೊಗ್ಗ ಜಿಲ್ಲೆಯ ಸೊರಬ ತಾಲ್ಲೂಕಿಗಳಿಗೆ ಸೇರಿದ ಗ್ರಾಮೀಣ ರಸ್ತೆಗಳನ್ನು ಜಿಲ್ಲಾ ಮುಖ್ಯ ರಸ್ತೆಗಳನ್ನಾಗಿ ಮೇಲ್ದರ್ಜೆಗೇರಿಸುವ ಬಗ್ಗೆ.

**ಓದಲಾಗಿದೆ:**
1) ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ಬೆಂಗಳೂರು, ಇವರ ಪತ್ರ ಸಂಖ್ಯೆ: ಮುಇಂ:ಸಂಕದ:ರಶಾ:ಮೇಲ್ದರ್ಜೆ:ಮಂಡ್ಯ:ಸಇ5:8:2006–07, ದಿನಾಂಕ:27–4–06.
2) ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ಬೆಂಗಳೂರು, ಇವರ ಪತ್ರ ಸಂಖ್ಯೆ: ಮುಇಂ:ಸಂಕದ:ರಶಾ:ಸಇ3ಮೇಲ್ದರ್ಜೆ:2005–06, ದಿನಾಂಕ:20–3–06,
3) ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ಬೆಂಗಳೂರು, ಇವರ ಪತ್ರ ಸಂಖ್ಯೆ: ಮುಇಂ:ಸಂಕದ:ರಶಾ:ಸಇ6:ರಸ್ತೆಮೇಲ್ದರ್ಜೆ:ಕೋವಿವಿ:2005–06, ದಿನಾಂಕ: 5–4–06,

**ಪ್ರಸ್ತಾವನೆ:**

ಮೇಲೆ ಓದಲಾದ ಪತ್ರಗಳಲ್ಲಿ ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ಬೆಂಗಳೂರು ಇವರು ಮಂಡ್ಯ ಜಿಲ್ಲೆಯ ಕೆ.ಆರ್.ಪೇಟೆ ತಾಲ್ಲೂಕು, ಕೋಲಾರ ಜಿಲ್ಲೆಯ ಚಿಕ್ಕಬಳ್ಳಾಪುರ, ಚಿಂತಾಮಣಿ ಹಾಗೂ ಶ್ರೀನಿವಾಸಪುರ ಮತ್ತು ಶಿವಮೊಗ್ಗ ಜಿಲ್ಲೆಯ ಸೊರಬ ತಾಲ್ಲೂಕಿಗೆ ಸೇರಿದ ಈ ಕೆಳಕಂಡ ಗ್ರಾಮೀಣ ರಸ್ತೆಗಳನ್ನು ಜಿಲ್ಲಾ ಮುಖ್ಯ ರಸ್ತೆಗಳನ್ನಾಗಿ ಮೇಲ್ದರ್ಜೆಗೇರಿಸುವಂತೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ. ಸದರಿ ಗ್ರಾಮೀಣ ರಸ್ತೆಗಳು ತುಂಬಾ ದುಸ್ಥಿತಿಯಲ್ಲಿದ್ದು ವಾಹನಗಳು ಮತ್ತು ಸಾರ್ವಜನಿಕರು ಓಡಾಡಲು ತುಂಬಾ ತೊಂದರೆಯಾಗಿರುತ್ತದೆ. ಆದುದರಿಂದ ಈ ಗ್ರಾಮೀಣ ರಸ್ತೆಗಳನ್ನು ಸಾರ್ವಜನಿಕರ ಹಿತದೃಷ್ಟಿಯಿಂದ ಜಿಲ್ಲಾ ಮುಖ್ಯ ರಸ್ತೆಗಳನ್ನಾಗಿ ಮೇಲ್ದರ್ಜೆಗೇರಿಸುವುದು ಅವಶ್ಯಕವಾಗಿರುತ್ತದೆ ಎಂದು ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ಬೆಂಗಳೂರು ಇವರು ವರದಿ ಮಾಡಿರುತ್ತಾರೆ.

| ಕ್ರಮ ಸಂಖ್ಯೆ | ರಸ್ತೆಯ ಹೆಸರು | ಉದ್ದ ಕಿಮೀ |
|---|---|---|
| | **ಮಂಡ್ಯ ಜಿಲ್ಲೆ, ಕೆ.ಆರ್.ಪೇಟೆ ತಾಲ್ಲೂಕು:** | |
| 1. | ದಬ್ಬೇಘಟ್ಟದಿಂದ ಕೋಟಹಳ್ಳಿ ಮಾರ್ಗ ಮಾದಾಪುರ ರಸ್ತೆ. | 9.00 |
| 2. | ಕೆ.ಆರ್.ಪೇಟೆ – ಶ್ರವಣಬೆಳಗೊಳ ರಸ್ತೆಯಿಂದ ಬೆಟ್ಟದಹಳ್ಳಿ , ಜಕ್ಕನಹಳ್ಳಿ ಮಾರ್ಗ ಎಸ್.ಎ.ರಸ್ತೆಯಿಂದ ಕುಂದೂರು ರಸ್ತೆ ಸೇರುವ ರಸ್ತೆ. | 5.50 |
| 3. | ಸೋಮನಾಥಪುರದಿಂದ ಮಾಂಬಳ್ಳಿ ಮಾರ್ಗವಾಗಿ ಸೋಮನಹಳ್ಳಿ ರಸ್ತೆ. | 2.50 |
| 4. | ಬಲ್ಲೇನಹಳ್ಳಿಯಿಂದ ಕಾಶಿಮುರುಕನಹಳ್ಳಿ, ಬಸ್ತಿ ಮಾವಿನಕೆರೆ ಮಾರ್ಗ ರಾಜೇನಹಳ್ಳಿ ರಸ್ತೆ. | 11.50 |
| 5. | ಅಕ್ಕಿಹೆಬ್ಬಾಳು ಆಲಂಬಾಡಿ, ಮಾವಿನಕೆರೆ ಗುಡಲು ಮಾರ್ಗ ಬಿ.ಬಿ–ಬಿ.ಟಿ ರಸ್ತೆ ರಸ್ತೆ. | 8.00 |
| 6. | ಬೂಕನಕೆರೆಯಿಂದ ಚೋಕನಹಳ್ಳಿ ಮಾರ್ಗ ಬೊಮ್ಮಲಾಪುರ ರಸ್ತೆ. | 6.00 |
| 7. | ಕೊಟಗಹಳ್ಳಿ –ಸಂತೇಬಾಚಹಳ್ಳಿ ರಸ್ತೆಯಿಂದ ಬಿಲ್ಲೇನಹಳ್ಳಿ ಮಾರ್ಗ ಹೆತ್ತಗೋನಹಳ್ಳಿ ರಸ್ತೆ. | 4.00 |
| 8. | ಕೆ.ಆರ್.ಪೇಟೆ–ಶ್ರವಣಬೆಳಗೋಳ ರಸ್ತೆಯಿಂದ ಸಿಂಗನಹಳ್ಳಿ, ಸಾರಂಗಿ_ಜಾಗಿನಕೆರೆ ಮಾರ್ಗವಾಗಿ ಕೆ.ಆರ್.ಪೇಟೆ–ಸಂತೇಬಾಚಹಳ್ಳಿ ರಸ್ತೆ | 7.00 |
| 9. | ಕೆ.ಆರ್.ಪೇಟೆ–ಸಂತೇಬಾಚಹಳ್ಳಿ ರಸ್ತೆಯಿಂದ ಅಗ್ರಹಾರ ಬಾಚಹಳ್ಳಿ, ಮಾರ್ಗೋನಹಳ್ಳಿ ಮಾರ್ಗವಾಗಿ ಕೆ.ಆರ್.ಪೇಟೆ–ಶ್ರವಣಬೆಳಗೊಳ ರಸ್ತೆ. | 6.00 |
| 10. | ಕೆ.ಆರ್.ಪೇಟೆ–ನಾಗಮಂಗಲ ರಸ್ತೆಯಿಂದ ಬೊಮ್ಮನಾಯಕನಹಳ್ಳಿ, ಅರೆಬೊಪ್ಪನಹಳ್ಳಿ, ಚನ್ನಾಪುರ, ಬ್ಯಾಲದಕೆರೆ, ಚೌಡಗಟ್ಟ ಮಾರ್ಗ ವಸಂತಪುರ ಸೇರುವ ರಸ್ತೆ. | 16.50 |
| 11. | ಎಸ್.ಎ.ರಸ್ತೆಯಿಂದ ಮಂಡಲೀಕನಹಳ್ಳಿ, ಗೂಡೆಹೊಸಹಳ್ಳಿ ಮಾರ್ಗವಾಗಿ ಮಾದಾಪುರ–ಕಾಂತರಾಜಪುರ ರಸ್ತೆಗೆ ಸೇರುವ ರಸ್ತೆ. | 6.50 |
| 12. | ಸಂತೇಬಾಚಹಳ್ಳಿಯಿಂದ ಲಕ್ಷ್ಮೀಪುರ ಮಾರ್ಗವಾಗಿ ನಾಗಮಂಗಲ ತಾಲ್ಲೂಕು ಗಡಿಯವರೆಗಿನ ರಸ್ತೆ. | 3.00 |
| 13. | ಸಂತೇಬಾಚಹಳ್ಳಿಯಿಂದ ಹನುಮನಹಳ್ಳಿ ಮಾರ್ಗವಾಗಿ ನಾಗಮಂಗಲ ಗಡಿಯವರೆಗಿನ ರಸ್ತೆ. | 2.00 |
| 14 | ಸಂತೇಬಾಚಹಳ್ಳಿಯಿಂದ ಕೆ.ಆರ್.ಪೇಟೆ ರಸ್ತೆಯಿಂದ ಅಪ್ಪನಹಳ್ಳಿ ಮಾರ್ಗವಾಗಿ ಮೇಲುಕೋಟೆ ಶ್ರವಣಬೆಳಗೊಳ ರಸ್ತೆಯವರೆಗೆ ಸೇರುವ್ ರಸ್ತೆ. | 3.50 |
| 15 | ಅನಗೊಳ ಶ್ರವಣಬೆಳಗೊಳ ರಸ್ತೆಯಿಂದ ದೊಡ್ಡತಾರಹಳ್ಳಿ ಚಿಕ್ಕಬಿಳತಿ ಚನ್ನರಾಯಪಟ್ಟಣ ತಾಲ್ಲೂಕು ಗಡಿಯವರೆಗೆ | 4.00 |

| ಕ್ರಮ ಸಂಖ್ಯೆ | ರಸ್ತೆಯ ಹೆಸರು | ಉದ್ದ ಕಿಮೀ |
|---|---|---|
| 16 | ಎಸ್.ಎ.ರಸ್ತೆ ರಾಜ್ಯ ಹೆದ್ದಾರಿ 7 ರಿಂದ ತೆಂಡೆಕೆರೆ ತಗಡೂರು ಬಣ್ಣೇನಹಳ್ಳಿ ಮಾರ್ಗವಾಗಿ ಬೂಕನಕೆರೆ ಗ್ರಾಮಕ್ಕೆ ರಸ್ತೆ. | 6.50 |
| 17 | ಅಕ್ಕಿಹೆಬ್ಬಾಳು-ಮಂದಗೆರೆ ರಸ್ತೆಯಿಂದ ಮೂಡನಹಳ್ಳಿ ಅಲೇನಹಳ್ಳಿ ಹೊನ್ನೇನಹಳ್ಳಿ ಕಾಯಿರ್ ಫ್ಯಾಕ್ಟರಿ ಬಳಿ ಸದರಿ ರಸ್ತೆಗೆ ಸೇರುವ ರಸ್ತೆ. | 6.50 |
| 18. | ಕೆ.ಆರ್.ಪೇಟೆ ಬಂಡಿಹೊಳೆ ರಸ್ತೆಯಿಂದ ಹೆಗ್ಗಡಹಳ್ಳಿ ವಡ್ಡರಹಳ್ಳಿ ಐ.ಸಿ.ಎಲ್.ಕಾರ್ಖಾನೆ, ರಾಮೇನಹಳ್ಳಿ ಮುಖಾಂತರ ಕಿಕ್ಕೇರಿ ಮಂದಗೆರೆ ರಸ್ತೆಗೆ ಸೇರುವ ರಸ್ತೆ. | 12.00 |
| | **ಕೋಲಾರ ಜಿಲ್ಲೆ, ಚಿಕ್ಕಬಳ್ಳಾಪುರ ತಾಲ್ಲೂಕು** | |
| 1. | ಮುದ್ದೇನಹಳ್ಳಿಯಿಂದ ಸರ್.ಎಂ.ವಿಶ್ವೇಶ್ವರಯ್ಯನವರ ಸಮಾಧಿಗೆ ಹೋಗುವ ರಸ್ತೆ. | 1.80 |
| | **ಕೋಲಾರ ಜಿಲ್ಲೆ, ಚಿಂತಾಮಣಿ ತಾಲ್ಲೂಕು** | |
| 1. | ಮಲಮಾಚನಹಳ್ಳಿಯಿಂದ ಕೈವಾರ ವಯಾ ಚಿಕ್ಕತಡಪಿ, ದೊಡ್ಡತಡಪಿ ತುಮ್ಮನಹಳ್ಳಿ, ಮುತ್ತುಕದಹಳ್ಳಿ, ಜಂಗಮಶೀಗಹಳ್ಳಿ. | 17.50 |
| | **ಕೋಲಾರ ಜಿಲ್ಲೆ, ಶ್ರೀನಿವಾಸಪುರ ತಾಲ್ಲೂಕು** | |
| 1. | ಬಿ.ಬಿ.ರಸ್ತೆಯಿಂದ ಸಿ.ಆರ್.ಎಫ್.ರಸ್ತೆಗೆ ವಯಾ ಮದನಹಳ್ಳಿ ಕ್ರಾಸ್ ವೆಲಗಲಬುರ್ರೆ ಗಾಂಡ್ಲಹಳ್ಳಿ. | 10.00 |
| 2. | ಸಿ.ಆರ್.ಎಫ್.ರಸ್ತೆಯಿಂದ ದಳಸನೂರು, ಚಿರುವುನಹಳ್ಳಿ, ಅಗ್ರಹಾರ ಮುಖಾಂತರ ಚಿಂತಾಮಣಿ ಬಾರ್ಡರ್ ಸೇರುವ ರಸ್ತೆ. | 13.00 |
| | **ಶಿವಮೊಗ್ಗ ಜಿಲ್ಲೆ, ಸೊರಬ ತಾಲ್ಲೂಕು** | |
| 1. | ರಾಜ್ಯ ಹೆದ್ದಾರಿ ಸಂಖ್ಯೆ-1( ದೇವಸ್ಥಾನದ ಹಕ್ಕಲು)ಯನ್ನು ಹುರಳಿಕೊಪ್ಪ-ಮೂಡಿ ಮಾರ್ಗವಾಗಿ ತಿಳವಳ್ಳಿಯನ್ನು ಸೇರುವ ರಸ್ತೆ. | 11.60 |

**ಸರ್ಕಾರಿ ಆದೇಶ ಸಂಖ್ಯೆ: ಲೋಇ 97 ಸಿಆರ್ಎಂ 2006, ಬೆಂಗಳೂರು, ದಿನಾಂಕ: 11ನೇ ಮೇ 2006**

ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ಬೆಂಗಳೂರು, ಇವರು ಸಲ್ಲಿಸಿರುವ ಪ್ರಸ್ತಾವನೆಯನ್ನು ಪರಿಶೀಲಿಸಲಾಗಿ ಈ ಕೆಳಕಂಡ ಗ್ರಾಮೀಣ ರಸ್ತೆಗಳನ್ನು ಜಿಲ್ಲಾ ಮುಖ್ಯ ರಸ್ತೆಗಳನ್ನಾಗಿ ಮೇಲ್ದರ್ಜೆಗೇರಿಸಿ ಲೋಕೋಪಯೋಗಿ ಇಲಾಖೆಯ ವ್ಯಾಪ್ತಿಗೆ ತೆಗೆದುಕೊಳ್ಳಲು ಸರ್ಕಾರದ ಅನುಮೋದನೆಯನ್ನು ನೀಡಲಾಗಿದೆ.

| ಕ್ರಮ ಸಂಖ್ಯೆ | ರಸ್ತೆಯ ಹೆಸರು | ಉದ್ದ ಕಿಮೀ |
|---|---|---|
| | **ಮಂಡ್ಯ ಜಿಲ್ಲೆ, ಕೆ.ಆರ್.ಪೇಟೆ ತಾಲ್ಲೂಕು:** | |
| 1. | ದಬ್ಬೇಘಟ್ಟದಿಂದ ಕೋಟಹಳ್ಳಿ ಮಾರ್ಗ ಮಾದಾಪುರ ರಸ್ತೆ. | 9.00 |
| 2. | ಕೆ.ಆರ್.ಪೇಟೆ - ಶ್ರವಣಬೆಳಗೊಳ ರಸ್ತೆಯಿಂದ ಬೆಟ್ಟದಹಳ್ಳಿ , ಜಕ್ಕನಹಳ್ಳಿ ಮಾರ್ಗ ಎಸ್.ಎ.ರಸ್ತೆಯಿಂದ ಕುಂದೂರು ರಸ್ತೆ ಸೇರುವ ರಸ್ತೆ. | 5.50 |
| 3. | ಸೋಮನಾಥಪುರದಿಂದ ಮಾಂಬಳ್ಳಿ ಮಾರ್ಗವಾಗಿ ಸೋಮನಹಳ್ಳಿ ರಸ್ತೆ. | 2.50 |
| 4. | ಬಲ್ಲೇನಹಳ್ಳಿಯಿಂದ ಕಾಶಿಮುರುಕನಹಳ್ಳಿ, ಬಸ್ತಿ ಮಾವಿನಕೆರೆ ಮಾರ್ಗ ರಾಜೇನಹಳ್ಳಿ ರಸ್ತೆ. | 11.50 |
| 5. | ಅಕ್ಕಿಹೆಬ್ಬಾಳು ಆಲಂಬಾಡಿ, ಮಾವಿನಕೆರೆ ಗುಡಲು ಮಾರ್ಗ ಬಿ.ಬಿ-ಬಿ.ಟಿ ರಸ್ತೆ ರಸ್ತೆ. | 8.00 |
| 6. | ಬೂಕನಕೆರೆಯಿಂದ ಚೋಕನಹಳ್ಳಿ ಮಾರ್ಗ ಬೊಮ್ಮಲಾಪುರ ರಸ್ತೆ. | 6.00 |
| 7. | ಕೊಟಗಹಳ್ಳಿ -ಸಂತೇಬಾಚಹಳ್ಳಿ ರಸ್ತೆಯಿಂದ ಬಿಲ್ಲೇನಹಳ್ಳಿ ಮಾರ್ಗ ಹೆತ್ತಗೋನಹಳ್ಳಿ ರಸ್ತೆ. | 4.00 |
| 8. | ಕೆ.ಆರ್.ಪೇಟೆ-ಶ್ರವಣಬೆಳಗೋಳ ರಸ್ತೆಯಿಂದ ಸಿಂಗನಹಳ್ಳಿ, ಸಾರಂಗಿ_ಜಾಗಿನಕೆರೆ ಮಾರ್ಗವಾಗಿ ಕೆ.ಆರ್.ಪೇಟೆ-ಸಂತೇಬಾಚಹಳ್ಳಿ ರಸ್ತೆ | 7.00 |
| 9. | ಕೆ.ಆರ್.ಪೇಟೆ-ಸಂತೇಬಾಚಹಳ್ಳಿ ರಸ್ತೆಯಿಂದ ಅಗ್ರಹಾರ ಬಾಚಹಳ್ಳಿ, ಮಾರ್ಗೋನಹಳ್ಳಿ ಮಾರ್ಗವಾಗಿ ಕೆ.ಆರ್.ಪೇಟೆ-ಶ್ರವಣಬೆಳಗೊಳ ರಸ್ತೆ. | 6.00 |
| 10. | ಕೆ.ಆರ್.ಪೇಟೆ-ನಾಗಮಂಗಲ ರಸ್ತೆಯಿಂದ ಬೊಮ್ಮನಾಯಕನಹಳ್ಳಿ, ಅರೆಬೊಪ್ಪನಹಳ್ಳಿ, ಚನ್ನಾಪುರ, ಬ್ಯಾಲದಕೆರೆ, ಚೌಡಗಟ್ಟ ಮಾರ್ಗ ವಸಂತಪುರ ಸೇರುವ ರಸ್ತೆ. | 16.50 |
| 11. | ಎಸ್.ಎ.ರಸ್ತೆಯಿಂದ ಮಂಡಲೀಕನಹಳ್ಳಿ, ಗೂಡೆಹೊಸಹಳ್ಳಿ ಮಾರ್ಗವಾಗಿ ಮಾದಾಪುರ-ಕಾಂತರಾಜಪುರ ರಸ್ತೆಗೆ ಸೇರುವ ರಸ್ತೆ. | 6.50 |
| 12. | ಸಂತೇಬಾಚಹಳ್ಳಿಯಿಂದ ಲಕ್ಷ್ಮೀಪುರ ಮಾರ್ಗವಾಗಿ ನಾಗಮಂಗಲ ತಾಲ್ಲೂಕು ಗಡಿಯವರೆಗಿನ ರಸ್ತೆ. | 3.00 |
| 13. | ಸಂತೇಬಾಚಹಳ್ಳಿಯಿಂದ ಹನುಮನಹಳ್ಳಿ ಮಾರ್ಗವಾಗಿ ನಾಗಮಂಗಲ ಗಡಿಯವರೆಗಿನ ರಸ್ತೆ. | 2.00 |
| 14 | ಸಂತೇಬಾಚಹಳ್ಳಿಯಿಂದ ಕೆ.ಆರ್.ಪೇಟೆ ರಸ್ತೆಯಿಂದ ಅಪ್ಪನಹಳ್ಳಿ ಮಾರ್ಗವಾಗಿ ಮೇಲುಕೋಟೆ ಶ್ರವಣಬೆಳಗೊಳ ರಸ್ತೆಯವರೆಗೆ ಸೇರುವ್ ರಸ್ತೆ. | 3.50 |

| ಕ್ರಮ ಸಂಖ್ಯೆ | ರಸ್ತೆಯ ಹೆಸರು | ಉದ್ದ ಕಿಮೀ |
|---|---|---|
| 15 | ಅನಗೊಳ ಶ್ರವಣಬೆಳಗೊಳ ರಸ್ತೆಯಿಂದ ದೊಡ್ಡತಾರಹಳ್ಳಿ ಚಿಕ್ಕಬಿಳತಿ ಚನ್ನರಾಯಪಟ್ಟಣ ತಾಲ್ಲೂಕು ಗಡಿಯವರೆಗೆ | 4.00 |
| 16 | ಎಸ್.ಎ.ರಸ್ತೆ ರಾಜ್ಯ ಹೆದ್ದಾರಿ 7 ರಿಂದ ತೆಂಡೆಕೆರೆ ತಗಡೂರು ಬಣ್ಣೇನಹಳ್ಳಿ ಮಾರ್ಗವಾಗಿ ಬೂಕನಕೆರೆ ಗ್ರಾಮಕ್ಕೆ ರಸ್ತೆ. | 6.50 |
| 17 | ಅಕ್ಕಿಹೆಬ್ಬಾಳು-ಮಂದಗೆರೆ ರಸ್ತೆಯಿಂದ ಮೂಡನಹಳ್ಳಿ ಅಲೇನಹಳ್ಳಿ ಹೊನ್ನೇನಹಳ್ಳಿ ಕಾಯಿರ್ ಫ್ಯಾಕ್ಟರಿ ಬಳಿ ಸದರಿ ರಸ್ತೆಗೆ ಸೇರುವ ರಸ್ತೆ. | 6.50 |
| 18. | ಕೆ.ಆರ್.ಪೇಟೆ ಬಂಡಿಹೊಳೆ ರಸ್ತೆಯಿಂದ ಹೆಗ್ಗಡಹಳ್ಳಿ ವಡ್ಡರಹಳ್ಳಿ ಐ.ಸಿ.ಎಲ್.ಕಾರ್ಖಾನೆ, ರಾಮೇನಹಳ್ಳಿ ಮುಖಾಂತರ ಕಿಕ್ಕೇರಿ ಮಂದಗೆರೆ ರಸ್ತೆಗೆ ಸೇರುವ ರಸ್ತೆ. | 12.00 |
| **ಕೋಲಾರ ಜಿಲ್ಲೆ, ಚಿಕ್ಕಬಳ್ಳಾಪುರ ತಾಲ್ಲೂಕು** | | |
| 1. | ಮುದ್ದೇನಹಳ್ಳಿಯಿಂದ ಸರ್.ಎಂ.ವಿಶ್ವೇಶ್ವರಯ್ಯನವರ ಸಮಾಧಿಗೆ ಹೋಗುವ ರಸ್ತೆ. | 1.80 |
| **ಕೋಲಾರ ಜಿಲ್ಲೆ, ಚಿಂತಾಮಣಿ ತಾಲ್ಲೂಕು** | | |
| 1. | ಮಲಮಾಚನಹಳ್ಳಿಯಿಂದ ಕೈವಾರ ವಯಾ ಚಿಕ್ಕತಡಪಿ, ದೊಡ್ಡತಡಪಿ ತುಮ್ಮನಹಳ್ಳಿ, ಮುತ್ತುಕದಹಳ್ಳಿ, ಜಂಗಮಶೀಗಹಳ್ಳಿ. | 17.50 |
| **ಕೋಲಾರ ಜಿಲ್ಲೆ, ಶ್ರೀನಿವಾಸಪುರ ತಾಲ್ಲೂಕು** | | |
| 1. | ಬಿ.ಬಿ.ರಸ್ತೆಯಿಂದ ಸಿ.ಆರ್.ಎಫ್.ರಸ್ತೆಗೆ ವಯಾ ಮದನಹಳ್ಳಿ ಕ್ರಾಸ್ ವೆಲಗಲಬುರ್ರೆ ಗಾಂಡ್ಲಹಳ್ಳಿ. | 10.00 |
| 2. | ಸಿ.ಆರ್.ಎಫ್.ರಸ್ತೆಯಿಂದ ದಳಸನೂರು, ಚಿರುವುನಹಳ್ಳಿ, ಅಗ್ರಹಾರ ಮುಖಾಂತರ ಚಿಂತಾಮಣಿ ಬಾರ್ಡರ್ ಸೇರುವ ರಸ್ತೆ. | 13.00 |
| **ಶಿವಮೊಗ್ಗ ಜಿಲ್ಲೆ, ಸೊರಬ ತಾಲ್ಲೂಕು** | | |
| 1. | ರಾಜ್ಯ ಹೆದ್ದಾರಿ ಸಂಖ್ಯೆ-1( ದೇವಸ್ಥಾನದ ಹಕ್ಕಲು)ಯನ್ನು ಹುರಳಿಕೊಪ್ಪ-ಮೂಡಿ ಮಾರ್ಗವಾಗಿ ತಿಳವಳ್ಳಿಯನ್ನು ಸೇರುವ ರಸ್ತೆ. | 11.60 |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಡಿ.ಆರ್. ಶಶಿಧರ್**

ಪಿ.ಆರ್. 818

ಸರ್ಕಾರದ ಅಧೀನ ಕಾರ್ಯದರ್ಶಿ(ಪ್ರಭಾರ)
ಲೋಕೋಪಯೋಗಿ ಇಲಾಖೆ (ಸಂಪರ್ಕ).

## ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ

**ವಿಷಯ:** ಶ್ರೀ ಹೆಚ್.ಆರ್. ಜಯದೇವಪ್ಪ, ಜಂಟಿ ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ, ಶ್ರೀ ಎಂ. ರಾಮಕೃಷ್ಣ, ಸಹಾಯಕ ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ, ಹಾಗೂ ಶ್ರೀ ಬಿ.ಟಿ. ರಾಧಾಕೃಷ್ಣ, ಅಂದಿನ ಅಧೀಕ್ಷಕರು, ಕರ್ನಾಟಕ ರಾಜ್ಯ ತೆಂಗಿನ ನಾರಿನ ಸಹಕಾರ ಮಹಾಮಂಡಳಿ ನಿಗಮ ನಿಯಮಿತ, ಇವರುಗಳು ಕರ್ನಾಟಕ ರಾಜ್ಯ ತೆಂಗಿನ ನಾರಿನ ಸಹಕಾರ ಮಹಾಮಂಡಳಿ ನಿಗಮ ನಿಯಮಿತ, ಬೆಂಗಳೂರು, ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದ ಅವಧಿಯಲ್ಲಿ ಎಸಗಿರುವ ಆರೋಪಗಳಿಗೆ ಸಂಬಂಧಿಸಿದಂತೆ ಇಲಾಖಾ ವಿಚಾರಣೆಯನ್ನು ನಡೆಸಲು ಲೋಕಾಯುಕ್ತ ಕಛೇರಿಗೆ ವಹಿಸುವ ಬಗ್ಗೆ.

**ಓದಲಾಗಿದೆ:**
1) ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ಪತ್ರ ಸಂಖ್ಯೆ: ಸಿಓಎಂಪಿಟಿ/ಲೋಕ್/ಬಿಸಿಡಿ/256/2002-ಎಆರ್ಇ-5/ದಿನಾಂಕ: 08.02.2006
2) ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ಪತ್ರ ಸಂಖ್ಯೆ: ಸಿಓಎಂಪಿಟಿ/ಲೋಕ್/ಬಿಸಿಡಿ/256/2002-03, ದಿನಾಂಕ: 14.02.2006

**ಪ್ರಸ್ತಾವನೆ:-**

ಮೇಲೆ ಓದಲಾದ ಕ್ರಮ ಸಂಖ್ಯೆ (1) ಮತ್ತು (2) ರ ಪತ್ರದಲ್ಲಿ ಕರ್ನಾಟಕ ಲೋಕಾಯುಕ್ತ, ಬೆಂಗಳೂರು ರವರು ಶ್ರೀ ಹೆಚ್.ಆರ್. ಜಯದೇವಪ್ಪ, ಜಂಟಿ ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ, ಶ್ರೀ ಎಂ. ರಾಮಕೃಷ್ಣ, ಸಹಾಯಕ ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ, ಶ್ರೀ ಬಿ.ಟಿ. ರಾಧಾಕೃಷ್ಣ, ಅಂದಿನ ಅಧೀಕ್ಷಕರು, ಕರ್ನಾಟಕ ರಾಜ್ಯ ತೆಂಗಿನ ನಾರಿನ ಸಹಕಾರ ಮಹಾಮಂಡಳಿ, ಇವರುಗಳು, ಕರ್ನಾಟಕ ರಾಜ್ಯ ತೆಂಗಿನ ನಾರಿನ ಸಹಕಾರ ಮಹಾಮಂಡಳಿ, ಬೆಂಗಳೂರು, ಇಲ್ಲಿ ಕಾರ್ಯ ನಿರ್ವಹಿಸುತ್ತಿದ್ದ ಅವಧಿಯಲ್ಲಿ ಕರ್ತವ್ಯ ಲೋಪ, ಹಣ ದುರುಪಯೋಗ ಹಾಗೂ ನಿಯಮಬಾಹಿರ ಕ್ರಮ ಕೈಗೊಂಡಿರುತ್ತಾರೆಂದು ಶ್ರೀ ಬೋರೇಗೌಡ, ಅಂದಿನ ವ್ಯವಸ್ಥಾಪಕರು ಕರ್ನಾಟಕ ರಾಜ್ಯ ತೆಂಗಿನ ನಾರಿನ ಸಹಕಾರ ಮಹಾಮಂಡಳಿ ನಿಗಮ (ನಿ), ಹಾಗೂ ಶ್ರೀ ಎಸ್.ಎಲ್. ಧನಂಜೇಗೌಡ, ಅಂದಿನ ವ್ಯವಸ್ಥಾಪಕರು, ತೆಂಗಿನ ನಾರಿನ ಎಂಪೋರಿಯಮ್ ಚಿಕ್ಕಮಗಳೂರು ಇವರುಗಳು ನೀಡಿದ ದೂರಿನ ಹಿನ್ನೆಲೆಯಲ್ಲಿ ಕರ್ನಾಟಕ ಲೋಕಾಯುಕ್ತ ಕಛೇರಿಯವರು ಈ ದೂರಿನ ಬಗ್ಗೆ ಪೂರ್ವಭಾವಿ ತನಿಖೆ ನಡೆಸಿ, ತನಿಖಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ.

ಈ ವರದಿಯಲ್ಲಿ ಶ್ರೀ ಹೆಚ್. ಆರ್. ಜಯದೇವಪ್ಪ, ಜಂಟಿ ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ, ಅಂದಿನ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ರಾಜ್ಯ ತೆಂಗಿನ ನಾರಿನ ಸಹಕಾರ ಮಹಾಮಂಡಳಿ ನಿಗಮ ನಿಯಮಿತ,

ಶ್ರೀ ಎಂ.ರಾಮಕೃಷ್ಣ, ಸಹಾಯಕ ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ, ಅಂದಿನ ಕಾರ್ಯದರ್ಶಿಗಳು, ಕರ್ನಾಟಕ ರಾಜ್ಯ ತೆಂಗಿನ ನಾರಿನ ಸಹಕಾರ ಮಹಾಮಂಡಳಿ ನಿಗಮ ನಿಯಮಿತ, ಶ್ರೀ ಬಿ.ಟಿ. ರಾಧಾಕೃಷ್ಣ, ಅಂದಿನ ಅಧೀಕ್ಷಕರು, ಹಾಗೂ ಶ್ರೀ ಪಿ.ಎಂ.ನಾಗೇಂದ್ರಪ್ಪ, ಅಂದಿನ ಅಧ್ಯಕ್ಷರು, ಕರ್ನಾಟಕ ರಾಜ್ಯ ತೆಂಗಿನ ನಾರಿನ ಸಹಕಾರ ಮಹಾಮಂಡಳಿ ನಿಗಮ ನಿಯಮಿತ, ಇವರ ವಿರುದ್ದ ಆರೋಪಗಳು ಮೇಲ್ನೋಟಕ್ಕೆ ಸತ್ಯವೆಂದು ಕಂಡು ಬರುವುದರಿಂದ, ಈ ಪ್ರಕರಣದಲ್ಲಿ ಇವರುಗಳ ವಿರುದ್ದ ಇಲಾಖಾ ವಿಚಾರಣೆಯನ್ನು ಕೈಗೊಳ್ಳುವಂತೆ ಮತ್ತು ಇವರಿಂದ ಸದರಿ ನಿಗಮಕ್ಕೆ ಆಗಿರುವ ಆರ್ಥಿಕ ನಷ್ಟವನ್ನು ವಸೂಲಿ ಮಾಡಲು ಕ್ರಮ ಕೈಗೊಳ್ಳುವಂತೆ ತಿಳಿಸುತ್ತಾ, ಈ 4 ಅಧಿಕಾರಿಗಳ ವಿರುದ್ದ ಕರ್ನಾಟಕ ನಾಗರೀಕ ಸೇವಾ (ಸಿಸಿಎ) ನಿಯಮಾವಳಿಗಳು ನಿಯಮ 14 (ಎ)ರ ಪ್ರಕಾರ ಇಲಾಖಾ ವಿಚಾರಣೆ ನಡೆಸಲು ಲೋಕಾಯುಕ್ತ ಕಛೇರಿಗೆ ಈ ಪ್ರಕರಣವನ್ನು ವಹಿಸುವಂತೆ ಕೋರಿರುತ್ತಾರೆ.

ಮೇಲ್ಕಂಡ 4 ಅಧಿಕಾರಿಗಳ ಪೈಕಿ ಶ್ರೀ ಪಿ.ಎಂ. ನಾಗೇಂದ್ರಪ್ಪ, ಇವರು ನಾನ್ ಅಫಿಷಿಯಲ್ ಮೆಂಬರ್ ಆಗಿರುವುದರಿಂದ, ಇವರ ವಿರುದ್ದ ಇಲಾಖಾ ವಿಚಾರಣೆ ಕೈಗೊಳ್ಳಲು ಅವಕಾಶವಿಲ್ಲ. ಆದರೆ, ಉಳಿದ ಮೂವರು ಅಧಿಕಾರಿಗಳ ವಿರುದ್ದ ಕರ್ನಾಟಕ ನಾಗರೀಕ ಸೇವಾ (ಸಿಸಿಎ) ನಿಯಮಾವಳಿಗಳು 1957 ರಡಿಯಲ್ಲಿ ಇಲಾಖಾ ವಿಚಾರಣೆ ನಡೆಸಿ, ವಿಚಾರಣೆಯಲ್ಲಿ ಇವರೆಲ್ಲರೂ ಸದರಿ ನಿಗಮದ ಆರ್ಥಿಕ ನಷ್ಟಕ್ಕೆ ಹೊಣೆಗಾರರಾಗಿದ್ದಲ್ಲಿ ಇವರೆಲ್ಲರಿಂದ ಸದರಿ ಮೊತ್ತವನ್ನು ವಸೂಲಿ ಮಾಡಲು ದಂಡನೆ ವಿಧಿಸಬಹುದು.

ಈ ತನಿಖಾ ವರದಿಯನ್ನು ಪರಿಶೀಲಿಸಿ, ಶ್ರೀ ಹೆಚ್. ಆರ್. ಜಯದೇವಪ್ಪ, ಜಂಟಿ ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ, ಶ್ರೀ ಬಿ.ಟಿ. ರಾಧಾಕೃಷ್ಣ, ಅಂದಿನ ಅಧೀಕ್ಷಕರು, ಕರ್ನಾಟಕ ರಾಜ್ಯ ತೆಂಗಿನ ನಾರಿನ ಸಹಕಾರ ಮಹಾಮಂಡಳಿ ನಿಗಮ ನಿಯಮಿತ, ಶ್ರೀ ಎಂ. ರಾಮಕೃಷ್ಣ, ಸಹಾಯಕ ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ, ಇವರುಗಳು ಕರ್ನಾಟಕ ರಾಜ್ಯ ತೆಂಗಿನ ನಾರಿನ ಸಹಕಾರ ಮಹಾಮಂಡಳಿ

ನಿಗಮ ನಿಯಮಿತ, ಇಲ್ಲಿ ಕಾರ್ಯ ನಿರ್ವಹಿಸುತ್ತಿರುವ ಅವಧಿಯಲ್ಲಿ ಕರ್ತವ್ಯ ಲೋಪ ಎಸಗಿರುವ ಆರೋಪಗಳ ಬಗ್ಗೆ ಇವರುಗಳ ವಿರುದ್ದ ಜಂಟಿ ಇಲಾಖಾ ವಿಚಾರಣೆಯನ್ನು ನಡೆಸಲು ಕರ್ನಾಟಕ ನಾಗರೀಕ ಸೇವಾ (ಸಿಸಿಎ) ನಿಯಮಾವಳಿಗಳು 1957ರ ನಿಯಮ 14 (ಎ) ರ ಪ್ರಕಾರ ಈ ಪ್ರಕರಣವನ್ನು ಮಾನ್ಯ ಲೋಕಾಯುಕ್ತ, ಕರ್ನಾಟಕ, ಬೆಂಗಳೂರು, ಇವರಿಗೆ ವಹಿಸಲು ಸರ್ಕಾರವು ತೀರ್ಮಾನಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ ವಾಕೈ 45 ಕೈಸೇವಿ 2006. ಬೆಂಗಳೂರು, ದಿನಾಂಕ: 25ನೇ ಮೇ 2006**

ಸರ್ಕಾರವು ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ ಶ್ರೀ ಹೆಚ್.ಆರ್. ಜಯದೇವಪ್ಪ ಜಂಟಿ ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ, ಶ್ರೀ ಎಂ. ರಾಮಕೃಷ್ಣ, ಸಹಾಯಕ ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ, ಶ್ರೀ ಬಿ.ಟಿ. ರಾಧಾಕೃಷ್ಣ, ಅಂದಿನ ಅಧೀಕ್ಷಕರು, ಕರ್ನಾಟಕ ರಾಜ್ಯ ತೆಂಗಿನ ನಾರಿನ ಸಹಕಾರ ಮಹಾಮಂಡಳಿ ನಿಗಮ ನಿಯಮಿತ, ಬೆಂಗಳೂರು ಇವರುಗಳು ಈ ಹಿಂದೆ ಕರ್ನಾಟಕ ರಾಜ್ಯ ತೆಂಗಿನ ನಾರಿನ ಸಹಕಾರ ಮಹಾಮಂಡಳಿಯಲ್ಲಿ ಕಾರ್ಯ ನಿರ್ವಹಿಸುತ್ತಿದ್ದ ಅವಧಿಯಲ್ಲಿ ಕರ್ತವ್ಯ ಲೋಪ, ಹಣ ದುರುಪಯೋಗ ಹಾಗೂ ನಿಯಮಬಾಹಿರ ಕ್ರಮ ಕೈಗೊಂಡಿರುವುದರಿಂದ ಇವರ ವಿರುದ್ದ ಕರ್ನಾಟಕ ನಾಗರೀಕಾ ಸೇವಾ (ಸಿಸಿಎ) ನಿಯಮಾವಳಿಗಳು 1957ರ ನಿಯಮ 11ರಡಿ ಇಲಾಖಾ ವಿಚಾರಣೆ ನಡೆಸಲು, ಈ ಪ್ರಕರಣವನ್ನು ಇದೇ ನಿಯಮಾವಳಿಗಳು ನಿಯಮ 14(ಎ)ರನ್ವಯ ಮಾನ್ಯ ಲೋಕಾಯುಕ್ತ, ಕರ್ನಾಟಕ ಬೆಂಗಳೂರು, ಇವರಿಗೆ ವಹಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಪದ್ಮಾವತಿ**

ಪಿ.ಆರ್. 832

ಸರ್ಕಾರದ ಅಧೀನ ಕಾರ್ಯದರ್ಶಿ,

ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ, (ಸೇವೆಗಳು)

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಶ್ರೀ ಶ್ರೀರಾಮರಾವ್, ನಿವೃತ್ತ ಪತ್ರಾಂಕಿತ ಸಹಾಯಕರು, ಇವರನ್ನು ಕರ್ನಾಟಕ ಲೋಕಾಯುಕ್ತ ಸಂಸ್ಥೆಯಲ್ಲಿ ಗುತ್ತಿಗೆ ಆಧಾರದ ಮೇಲೆ ಮರುನೇಮಕಾತಿ ಮಾಡಿರುವುದಕ್ಕೆ ಷರತ್ತು ಮತ್ತು ನಿಬಂಧನೆಗಳು.

**ಓದಲಾಗಿದೆ:** 1) ಅಧಿಸೂಚನೆ ಸಂಖ್ಯೆ: ಸಿಆಸುಇ 126 ಸೇಲೋಯು 2005, ದಿನಾಂಕ: 8.3.2006.

**ಪ್ರಸ್ತಾವನೆ:**

ಮೇಲೆ ಓದಲಾದ ದಿನಾಂಕ: 8.3.2006ರ ಅಧಿಸೂಚನೆಯಲ್ಲಿ ಶ್ರೀ ರಾಮರಾವ್ ನಿವೃತ್ತ ಪತ್ರಾಂಕಿತ ಸಹಾಯಕರು, ಇವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ದಿನಾಂಕ: 30.6.2006ರ ವರೆಗೆ ಕರ್ನಾಟಕ ಲೋಕಾಯುಕ್ತ ಸಂಸ್ಥೆಯಲ್ಲಿ ಖಾಲಿಯಿರುವ ಪತ್ರಾಂಕಿತ ಸಹಾಯಕ ಹುದ್ದೆಗೆ ಗುತ್ತಿಗೆ ಆಧಾರದ ಮೇಲೆ ಮರುನೇಮಕಾತಿ ಮಾಡಲಾಗಿರುತ್ತದೆ. ಸದರಿ ನೇಮಕಾತಿಗೆ ವೇತನ ಮತ್ತು ಭತ್ಯೆಗಳ ನಿಗದಿ ಹಾಗೂ ಷರತ್ತು ಮತ್ತು ನಿಬಂಧನೆಗಳನ್ನು ನಿಗದಿಪಡಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶದ ಸಂಖ್ಯೆ: ಸಿಆಸುಇ 126 ಸೇಲೋಯು 2005, ಬೆಂಗಳೂರು, ದಿನಾಂಕ: 27ನೇ ಮೇ 2006**

ಶ್ರೀ ಶ್ರೀರಾಮರಾವ್ ಇವರನ್ನು ಕರ್ನಾಟಕ ಲೋಕಾಯುಕ್ತ ಸಂಸ್ಥೆಯಲ್ಲಿ ಖಾಲಿಯಿರುವ ಪತ್ರಾಂಕಿತ ಸಹಾಯಕರ ಹುದ್ದೆಯಲ್ಲಿ ದಿನಾಂಕ: 08.03.2006 ರಿಂದ 30.6.2006ರ ಅವಧಿಗೆ ಮಾತ್ರ ಗುತ್ತಿಗೆ ಆಧಾರದ ಮೇಲೆ ಮರುನೇಮಕಾತಿ ಮಾಡಲಾಗಿರುತ್ತದೆ. ಇವರ ಮರುನೇಮಕಾತಿ ವೇತನವನ್ನು ಕರ್ನಾಟಕ ನಾಗರಿಕ ಸೇವಾ ನಿಯಮಾವಳಿಯ ನಿಯಮ 313(ಬಿ)

ಪ್ರಕಾರ ಮಾಸಿಕ ರೂ.3,870/– (ಮೂರು ಸಾವಿರದ ಎಂಟು ನೂರ ಎಪ್ಪತ್ತು ರೂಪಾಯಿಗಳು ಮಾತ್ರ) ನಿಗದಿಪಡಿಸಿದೆ. ಈ ಮರುನೇಮಕಾತಿ ವೇತನದೊಂದಿಗೆ ಶ್ರೀಯುತರು ನಿವೃತ್ತಿಯ ಸಮಯದಲ್ಲಿ ಪಡೆಯುತ್ತಿದ್ದ ಅಂತಿಮ ಮೂಲವೇತನವಾದ ರೂ.10,100/– ಗಳಿಗೆ ಕಾಲಕಾಲಕ್ಕೆ ಲಭ್ಯವಾಗುವ ತುಟ್ಟಿ ಭತ್ಯೆ, ಮನೆ ಬಾಡಿಗೆ ಭತ್ಯೆ ಹಾಗೂ ನಗರ ಪರಿಹಾರ ಭತ್ಯೆಗಳನ್ನು ಪಡೆಯಲು ಅರ್ಹರಿರುತ್ತಾರೆ. ಆದರೆ ನಿವೃತ್ತಿ ವೇತನದ ಮೇಲಿನ ತುಟ್ಟಿ ಭತ್ಯೆಯನ್ನು ಪಡೆಯುವಂತಿಲ್ಲ. ನಿವೃತ್ತಿ ನಂತರದ ಸೇವೆಯನ್ನು ಅರ್ಹತಾದಾಯಕ ಸೇವೆಯೆಂದು ಪರಿಗಣಿಸಲಾಗುವುದಿಲ್ಲ. ಇವರ ಮರುನೇಮಕಾತಿಗೆ ಷರತ್ತು ಮತ್ತು ನಿಬಂಧನೆಗಳನ್ನು ಇದರೊಂದಿಗೆ ಲಗತ್ತಿಸಿರುವ ಅನುಬಂಧದಲ್ಲಿರುವಂತೆ ನಿಗದಿಪಡಿಸಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 765 ವೆಚ್ಚ–5:2006, ದಿನಾಂಕ: 11.5.2006ರಲ್ಲಿ ನೀಡಿರುವ ಸಹಮತಿಯ ಮೇರೆಗೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶದ ಮೇರೆಗೆ ಮತ್ತು ಅವರ ಹೆಸರಿನಲ್ಲಿ,

**ಕೆ.ವಿ. ರಾಮ**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ, (ಸೇವಾ ನಿಯಮಗಳು–2).

**ಅನುಬಂಧ**

**ಗುತ್ತಿಗೆ ಅಧಾರದ ಮರುನೇಮಕಾತಿಯ ಬಗ್ಗೆ ಷರತ್ತು ಮತ್ತು ನಿಬಂಧನೆಗಳು**

1. ಶ್ರೀ ಶ್ರೀರಾಮರಾವ್ ರವರ ಗುತ್ತಿಗೆ ನೇಮಕಾತಿ ಅವಧಿಯು ದಿನಾಂಕ: 10.3.2006 ರಿಂದ 30.06.2006ರ ಅವಧಿಯವರೆಗೆ ಅಥವಾ ಮುಂದಿನ ಆದೇಶ ಹೊರಡಿಸುವವರೆಗೆ ಇವೆರಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಮಾತ್ರ ಇದ್ದು, ಇದೊಂದು ತಾತ್ಕಾಲಿಕ ನೇಮಕಾತಿ ಆಗಿರುತ್ತದೆ.
2. ಶ್ರೀ ಶ್ರೀರಾಮರಾವ್ ಇವರು ಪಡೆಯುತ್ತಿರುವ ನಿವೃತ್ತಿ ವೇತನದೊಂದಿಗೆ ರೂ.3,870/– ಮರುನೇಮಕಾತಿ ವೇತನವನ್ನು ಪಡೆಯಲು ಅರ್ಹರಾಗಿರುತ್ತಾರೆ. ಈ ವೇತನದ ಜೊತೆಗೆ ಅವರು ನಿವೃತ್ತಿ ಹೊಂದುವಾಗ ಪಡೆಯುತ್ತಿದ್ದ ಮೂಲ ವೇತನದ ಮೇಲೆ ಕಾಲಕಾಲಕ್ಕೆ ಲಭ್ಯವಾಗುವ ತುಟ್ಟಿಭತ್ಯೆ, ಮನೆ ಬಾಡಿಗೆ ಭತ್ಯೆ, ನಗರ ಪರಿಹಾರ ಭತ್ಯೆಯನ್ನು ಪಡೆಯಲು ಅರ್ಹರಾಗಿರುತ್ತಾರೆ. ಆದರೆ ಅವರು ಪಡೆಯುತ್ತಿರುವ ನಿವೃತ್ತಿ ವೇತನದ ಮೇಲೆ ತುಟ್ಟಿಭತ್ಯೆ ಸೇರಿದಂತೆ ಯಾವುದೇ ಇತರ ಭತ್ಯೆಗಳು ಲಭ್ಯವಿರುವುದಿಲ್ಲ.
3. ಸದರಿ ಗುತ್ತಿಗೆ ನೌಕರರು ಸಾರ್ವಜನಿಕ ಹಿತದೃಷ್ಟಿಯಿಂದ ಪ್ರಯಾಣ ಮಾಡಲೇಬೇಕಾದಲ್ಲಿ ಮಾತ್ರ ಅವರು ನೇಮಕಾತಿ ಹೊಂದಿರುವ ಹುದ್ದೆಯ ಕಾಲಿಕ ವೇತನ ಶ್ರೇಣಿಯ ಕನಿಷ್ಠ ವೇತನದ ಮೇಲೆ ನಿಯಮಾನುಸಾರ ಲಭ್ಯವಿರುವ ಪ್ರಯಾಣ ಭತ್ಯೆ ಮತ್ತು ದಿನಭತ್ಯೆಯನ್ನು ಪಡೆಯಲು ಅರ್ಹರಾಗಿರುತ್ತಾರೆ.
4. ಸದರಿ ಗುತ್ತಿಗೆ ನೌಕರರುಗಳು ವಾರ್ಷಿಕ 15 ದಿನಗಳ ಸಾಂದರ್ಭಿಕ ರಜೆ ಮತ್ತು ಕೆ.ಸಿ.ಎಸ್.ಆರ್ಸ್. ನಿಯಮ 150ರ ಪ್ರಕಾರ ಗಳಿಕೆ ರಜೆ ಪಡೆಯಲು ಅರ್ಹರಾಗಿರುತ್ತಾರೆ.
5. ಒಪ್ಪಂದದ ಷರತ್ತು ಮತ್ತು ನಿಬಂಧನೆಗಳಲ್ಲಿ ನೀಡಿರುವ ಸೌಲಭ್ಯಗಳ ಹೊರತಾಗಿ ಬೇರಾವುದೇ ಸೌಲಭ್ಯಕ್ಕೆ ಅಂದರೆ ವೇತನ ಬಡ್ತಿ, ಪದೋನ್ನತಿ, ಪಿಂಚಣಿ ಇತ್ಯಾದಿ ಸೌಲಭ್ಯಗಳಿಗೆ ಸದರಿ ಗುತ್ತಿಗೆ ನೌಕರರು ಅರ್ಹರಾಗಿರುವುದಿಲ್ಲ.
6. ಸದರಿ ನೌಕರರ ದುರ್ವರ್ತನೆ, ನಿರ್ಲಕ್ಷತೆಯ ನಿಮಿತ್ತ ಸರ್ಕಾರಕ್ಕೆ ಸಂಬಂಧಿಸಬಹುದಾದ ಎಲ್ಲಾ ನಷ್ಟಗಳನ್ನು ಸರ್ಕಾರಕ್ಕೆ ಸದರಿ ನೌಕರರು ಭರಿಸಿಕೊಡಲು ಬದ್ಧರಾಗಿರತಕ್ಕದ್ದು.
7. ಸದರಿ ಮರುನೇಮಕಾತಿ ಅವಧಿಯ ಸೇವೆಯನ್ನು ನಿವೃತ್ತಿ ವೇತನ ಹಾಗೂ ಇತ್ಯಾದಿ ಸೌಲಭ್ಯಗಳಿಗೆ ಅರ್ಹತಾದಾಯಕ ಸೇವೆಯೆಂದು ಪರಿಗಣಿಸುವುದಿಲ್ಲ.
8. ಅವರ ಕರ್ತವ್ಯ, ಕಾರ್ಯ ಮತ್ತು ಪ್ರಕಾರ್ಯಗಳನ್ನು ಶ್ರದ್ಧೆ, ಭಕ್ತಿ ಮತ್ತು ಆಸಕ್ತಿಯಿಂದ ಅವರು ನೆರವೇರಿಸುವುದು.
9. ಅವರು ಕರ್ತವ್ಯವನ್ನು ಪಾಲಿಸುತ್ತಿರುವಾಗ ಅಥವಾ ನೆರವೇರಿಸುತ್ತಿರುವಾಗ ಅವರಿಗೆ ಲಭ್ಯವಾಗಬಹುದಾದ ಅಥವಾ ದೊರಕಬಹುದಾದ ಅಧಿಕೃತ ಮಾಹಿತಿಯನ್ನು ಗೌಪ್ಯವಾಗಿಟ್ಟು ಕಟ್ಟುನಿಟ್ಟಾಗಿ ಪಾಲಿಸಬೇಕು.
10. 1966ರ ಕರ್ನಾಟಕ ನಾಗರೀಕ ಸೇವಾ (ನಡತೆ) ನಿಯಮಾವಳಿ ಮತ್ತು 1957ರ ಕರ್ನಾಟಕ ನಾಗರಿಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗೆ ಅವರು ಬದ್ಧರಾಗಿರುತ್ತಾರೆ.
11. ಈ ಒಪ್ಪಂದದ ಷರತ್ತುಗಳನ್ನು ಉಲ್ಲಂಘಿಸಿದಲ್ಲಿ ಗುತ್ತಿಗೆ ನೇಮಕಾತಿಯು ತಾನಾಗಿಯೇ ಮುಕ್ತಾಯವಾಗುತ್ತದೆ.
12. ಅವರ ದುರ್ನಡತೆಯಿಂದಾಗಲೀ ಅಥವಾ ನಿರ್ಲಕ್ಷತೆ, ಉದಾಸೀನತೆಯಿಂದಾಗಲೀ ಮತ್ತು ಸರ್ಕಾರಕ್ಕೆ ಸಂಬಂಧಿಸಿದಂತೆ ಆರ್ಥಿಕ ನಷ್ಟವನ್ನು ಅವರು ಸರ್ಕಾರಕ್ಕೆ ತುಂಬಿಕೊಡಲು ಹೊಣೆಯಾಗಿರುತ್ತಾರೆ.
13. ಈ ಆದೇಶವನ್ನು ಸ್ವೀಕರಿಸಿದ ದಿನಾಂಕದಿಂದ ಏಳು ದಿನಗಳ ಒಳಗಾಗಿ ಐವತ್ತು (ರೂ.50–00) ರೂಪಾಯಿಗಳ ಮೌಲ್ಯದ ಛಾಪಾ ಕಾಗದದಲ್ಲಿ ಸದರಿ ನೇಮಕಾತಿಯ ಷರತ್ತು ಮತ್ತು ನಿಬಂಧನೆಗಳನ್ನು ಒಳಗೊಂಡಿರುವ ಕರಾರು ಪತ್ರವನ್ನು ಕ್ರಮಬದ್ಧ ರೀತಿಯಲ್ಲಿ ಸದರಿ ನೌಕರರಿಂದ ಬರೆಯಿಸಿಕೊಳ್ಳತಕ್ಕದ್ದು.

**ಕೆ.ವಿ. ರಾಮ**

ಸರ್ಕಾರದ ಅಧೀನ ಕಾರ್ಯದರ್ಶಿ,

ಪಿ.ಆರ್. 829 ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ, (ಸೇವಾ ನಿಯಮಗಳು–2).